# ಹಿಂಗಡ ಪತ್ರ

[ ರೇಡಿಯೊ ಏಕಾಂಕ ]

ಲೇಖಕರು ಜಿ. ಜಿ. ಹೆಗಡೆ

ಪ್ರಕಾಶಕರು
ಬುಕ್ ಸ್ಟಾಲ್, ಹುಬ್ಬಳ್ಳಿ.

ಬೆಲೆ 0-6-0

# ಹಿಂಗಡ ಪತ್ರ

[ ರೇಡಿಯೊ ಏಕಾಂಕ ]

ಲೇಖಕರು ಜಿ. ಜಿ ಹೆಗಡೆ

ಪ್ರಕಾಶಕರು

ಸಿಟಿ ಬುಕ್ ಸ್ಟಾಲ್, ಹುಬ್ಬಳ್ಳಿ.

೧೯೫೫

ಬೆಲೆ . 0-6-0

# ಶ್ರೀ ಜಿ ಜಿ ಹೆಗಡೆಯವರು

ಶ್ರೀ ಗಂಗಾಧರ ಗೋಪಾಲಕೃಷ್ಣ ಹೆಗಡೆಯವರು ಕನ್ನಡ ನಾಟಕ ಪ್ರಪಂಚಕ್ಕೆ ಅಪರಿಚಿತರಲ್ಲ ಅವರ "ಹರಿಶ್ಚಂದ್ರ" "ಚಲೇಜಾವ್", "ಪುಂಡಲೀಕ", "ದೇವತಾ", "ಪಾಣಿಗ್ರಹಣ" ಮುಂತಾದ ನಾಟಕಗಳು ಉತ್ತರ ಕರ್ನಾಟಕದ ರಸಿಕ ಪ್ರೇಕ್ಷಕ ವರ್ಗಕ್ಕೆ ಪರಿಚಿತವಾಗಿವೆ ಸದಭಿರುಚಿಗೆ ಭಂಗಬಾರದಂಥ ತಿಳಿ ಹಾಸ್ಯ, ಸ್ವಲ್ಪ ಮಾತುಗಳಲ್ಲೇ ಪಾತ್ರಗಳ ಸ್ವಭಾವವನ್ನು ಸ್ಫುಟಗೊಳಿಸುವ ಕೌಶಲ್ಯ, ರಂಗಭೂಮಿಯಲ್ಲಿ ಪರಿಣಾಮಕರವಾಗುವಂತೆ ಬರೆಯುವ ದೃಷ್ಟಿ ಇವು ಅವರ ನಾಟಕಗಳ ಯಶಸ್ಸಿಗೆ ಕಾರಣವಾಗಿವೆ

ಶ್ರೀ ಹೆಗಡೆಯವರು ದೃಶ್ಯ ನಾಟಕಗಳಲ್ಲದೆ ಶ್ರಾವ್ಯ ನಾಟಕಗಳಲ್ಲೂ ಜನರನ್ನು ಮೆಚ್ಚಿಸಬಲ್ಲರೆಂಬುದು ಅವರ ರೇಡಿಯೊ ನಾಟಕಗಳಿಗೆ ದೊರೆತ ಸಾಫಲ್ಯದಿಂದ ಸ್ಪಷ್ಟವಾಗುತ್ತದೆ

ದಿ ಪಂಡಿತ ತಾರಾನಾಥರಲ್ಲಿ ಪತ್ರಿಕಾವೃತ್ತಿಯನ್ನು ಅಭ್ಯಸಿಸಿದ ಅವರು ನಾಟಕ ರಂಗದಲ್ಲೂ ಅವರಿಂದಲೆ ದೀಕ್ಷೆ ಪಡೆದರು "ಪ್ರಜಾಮತ", "ನವಯುಗ", "ಕರ್ನಾಟಕ ಬಂಧು" ಮುಂತಾದ ಪತ್ರಿಕೆಗಳಲ್ಲಿ ದುಡಿದು ಇವರೀಗ "ಸಂಯುಕ್ತ ಕರ್ನಾಟಕ ದಿನ ಪತ್ರಿಕೆ"ಯ ಸಂಪಾದಕ ಮಂಡಲಿಯಲ್ಲಿದ್ದಾರೆ

ಈಗಾಗಲೇ ಇವರು ರಂಗಭೂಮಿಗೆ ಯೋಗ್ಯವಾದ ಹದಿನಾಲ್ಕು ನಾಟಕಗಳನ್ನೂ ಅನೇಕ ರೇಡಿಯೊ ನಾಟಕಗಳನೂ ಬರೆದಿದ್ದಾರೆ

* * * *

ವಿ ಸೂ – ಲೇಖಕರ ಅಪ್ಪಣೆ ಪಡೆಯದೆ ಯಾರೂ ಇದನ್ನು ಅಭಿನಯಿಸಲಾಗದು ಅಭಿನಯಿಸಬಯಸುವವರು ಜಿ ಜಿ ಹೆಗಡೆ C/o ಸಂಯುಕ್ತ ಕರ್ನಾಟಕ ದಿನ ಪತ್ರಿಕೆ, ಹುಬ್ಬಳ್ಳಿ ಇವರಿಗೆ ಬರೆದುಕೊಳ್ಳಬೇಕು

---

# ಹಿಂಗಡ ಪತ್ರ

[ಸದಾನಂದರಾಯರ ಮನೆ ಪಡಸಾಲೆ ಯಲ್ಲಿ ಟೇಬಲ್ಲಿನಪರು ಕುಳಿತು ಅವರು ಏನನ್ನೋ ಬರೆಯುತ್ತ ಕುಳಿತಿದ್ದಾರೆ]

ಸದಾ- ಏನೇ, ಏನ ಹೇಳ್ತೇನಿ

ಕಾವೇರಿ- (ಅವರ ಹೆಂಡತಿ) ಹಂ, ಹೇಳ್ರಿ

ಸದಾ- ೧ನೇ ತಾರೀಖಿನಿಂದ ೮ನೇ ತಾರೀಖಿನ ವರೆಗೆ ದಿನಾ ೧|| ಸೇರು ಎಂಟು ಒಂದೂವರೆ ಅಂದ್ರೆ ಹನ್ನೆರಡು ಹನ್ನೆರಡು ಸೇರಾತು ಒಂಬತ್ತನೇ ತಾರೀಖಿನ ದಿವಸ ಒಂದು ಪಾವು ಕಮ್ಮಿ, ಹತ್ತನೇ ತಾರೀಖಿನ ದಿವಸ ಒಂದು ನವಟಾಕ ಕಮ್ಮಿ ಅಂದ್ರೆ ಒಂಬತ್ತನೇ ತಾರೀಖಿನ ದಿವಸ ಸವ್ವಾಸೇರಾತು ಹತ್ತನೇ ತಾರೀಖಿನ ದಿವಸ ನವಟಾಕ ಕಮ್ಮಿ ದೀಡಸೇರು ಅಂದ್ರೆ-ಹಂ-ನವಟಾಕ ಕಮ್ಮಿ ೧|| ಸೇರು ಮುಂದೆ ೧೧ನೇ ತಾರೀಖಿನಿಂದ ೧೩ನೇ ತಾರೀಖಿನ ವರೆಗೆ ದಿನಾ ಸವ್ವಾಸೇರು ಹನ್ನೊಂದು, ಹನ್ನೆರಡು, ಹದಿಮೂರು, ದಿನಕ್ಕೆ ೫ ಪಾವುಸೇರು ಅಂದ್ರೆ ಮೂರೂ ಮುಕ್ಕಾಲು ಸೇರು ಮತ್ತೆ ಏನೇ ಇಲ್ಲಿ ಬಾ ಇಲ್ಲೆ

ಕಾವೇರಿ — ಯಾಕೆ ? ಇನ್ನೂ ಇದೇ ಈಗ ಕಸಾ-ಮುಸರೀ ಮಾಡಿ ರಾಮಾ ಅಂತ ಅಡ್ಡಾಗೇನಿ ಇನ್ನರ್ಧ ತಾಸೀಗೆ ನಳಾ ಬರ್ತದ ಆಗ ಎದ್ದೆ ಅಂದ್ರೆ ಮತ್ತ ರಾತ್ರಿ ೧೧ ಹೊಡಿಯೂವರೆಗೂ-

ಸದಾ — ಅದು ಹೌದೆ ? ಆದರೆ, ಏನ ಹೇಳ್ತೇನಿ, ನಮ್ಮಂಥವರೀಗೆ ಒಂದು ಕೆಲಸ ಬಿಟ್ಟು ಇನ್ನೊಂದು ಕೆಲಸ ಮಾಡೂದೇ ವಿಶ್ರಾಂತಿ ಖರೆ ಅಂದ್ರ, ಇಂದ ಆದಿತ್ಯವಾರ ಏನ ಹೇಳ್ತೇನಿ, ರಜಾದ್ದಿವ್ಸ ನಾ ಯಾವದನ್ನೂ ತಲೀಗೆ ಹಾಕ್ಕೊಳ್ದೆ ರಾಜನಾಂಗ ಇರ್ಬೇಕು ಹೌದ ಲ್ಲೊ? ಆದರೆ ಎಲ್ಲಿದ ನಮ್ಮ ಹಣಬರದಾಗ ಅದು ? ಏನಹೇಳ್ತೇನಿ,

ಊಟಾದಲಾಗಾಂಚುತ್ತುಕುಂತೇನಿ. ಇದನ್ನಷ್ಟ ಮುಗಸಿ ಅಡ್ಡಾಗೋಣ ಅಂದ್ರೆ

ಕಾವೇರಿ— ಆಫೀಸಿನ ಕೆಲ್ಸ ಯಾಕ ತರ್ತೀರಿ ಮನೇಗೆ ? ತಂದ್ರು ತರವಲ್ಲ ರ‍್ಯಾಕ ? ಮಂದಿಗೆ ಯಾಕ ತ್ರಾಸ ಕೊಡ್ತೀರಿ ? ನಾ ಏನು ನಿಮ್ಮ ಆಫೀಸ ಕೆಲ್ಸಾ ಮಾಡುವ್ಹಾಂಗ ಅದೇನೇನು ?

ಸದಾ— ಆಫೀಸಿನ ಕೆಲಸ ಅಲ್ಲ ! (ನಕ್ಕು)ಏನ ಹೇಳ್ತೇನಿ, ಏನ ಹೇಳ್ಬೇಕು ನಿನಗೆ ? ಎದ್ದ ಬಾ ಅಂದ್ರೆ ಇದೇ ಈಗ ಅಡ್ಡಾಗೇನಿ ಅಂತ ನೆವ ಹೇಳ್ದಿ ಮಲಗಿದಲ್ಲಿಂದಲೇ ಇಪ್ಪತ್ತೆಂಟು ಮಾತು ಕೇಳ್ತಿ

ಕಾವೇರಿ— ಮಲಗಿದಾಕಿನ್ನ ಎಬ್ಸಿ ಮಾತ ಹಚ್ಚಿದವರು ಯಾರು ?

ಸದಾ—ಊಂ ಹುಂ ! ಸಿಟ್ಟಿಗೇಳಬ್ಯಾಡ ಏನ ಹೇಳ್ತೇನಿ

ಕಾವೇರಿ— ಏನು ಹೇಳೂದೂ ಬ್ಯಾಡ ! ನೀವು ಹೇಳೋದೆಲ್ಲ ಗೊತ್ತದ

ಸದಾ— ಗೊತ್ತದ ?

ಕಾವೇರಿ— ಹೂಂ ! ಮತ್ತೇನ ಹೇಳ್ತೀರಿ ? ಕೆಲಸ ಇಲ್ಲ-ಬಗಸ ಇಲ್ಲ. ಎದ್ದ ಬಾ, ಹರಟೆಹೊಡಿ, ಅಂತೀರಿ ಹೌದಲ್ಲೊ? ಅದೇನು ಬ್ಯಾಡ ಬಿಸಿಲು ರಣ ರಣಾ ಸುಡ್ತದ ನೀವೂ ಒಂದಿಷ್ಟು ಅಡ್ಡಾಗ್ರಿ ನಾನೂ ಕಣ್ಮುಚ್ತೇನೆ ನಳಾ ಬಂದು ನೀರು ತುಂಬಿದ ಮ್ಯಾಲೆ ಚಾಮಾಡಿ ಎಬ್ಬಸ್ತೇನಿ

ಸದಾ— ಈಗ ಮಲಗೂದು ಬ್ಯಾಡ ಸಂಜೆ ೪ ಗಂಟೇಕ್ಕ ನಾ ಹೊರಗ ಹೋಗಬೇಕಾಗ್ಯದ ಈ ಹಾಲಿಂದು ಲೆಕ್ಕ ಒಂದ ಮುಗಿಸಿಕೊಂಡ್ರೆ-

ಕಾವೇರಿ— ಅದೇನು ಮಹಾ ಬಿಡ್ರಿ ಶಾಮು ಮನೆಗೆ ಬಂದಮ್ಯಾಲೆ ಹೇಳಿ ಮಾಡ್ಸಿಬಿಟ್ಟರ್ತೇನಿ ನೀವೇನೂ ತ್ರಾಸ ತಗೊಂಬೂದು ಬ್ಯಾಡ

ಸದಾ— ಆಂ ! ಅಂದ್ರೆ ? ಅಂವ ಈ ರಣರಣ ಸುಡು ಬಿಸ್ಲಲ್ಲಿ ಉಣ್ಣು ಪುರ ಸೊತ್ತಿಲ್ದೆ ಎಲ್ಲಿ ಹೋಗ್ಯಾನ? ಯಾರು ಹೇಳವ್ರು ಕೇಳವ್ರು ಇದ್ದಾರೊ ಇಲ್ಲೊ? ಏನ ಹೇಳ್ತೇನಿ ! ಈಗ ಹೋಗೂದು ಬ್ಯಾಡಂತ ಹೇಳ್ಲಿಕ್ಕೆ ಬರ್ಲಿಲ್ಲೇನು ನಿನಗೆ ?

ಕಾವೇರಿ— ನಾ ಹೇಳಿದ್ರೆ ಕೇಳ್ತಾನೇನು ? ಎಲ್ಲಾ ನಿಮ್ಹಾಂಗ ? ಹೇಳಿದ ಮಾತು ಕಿವಿಗ ಹಾಕಿಕೊಂಡ್ರೆ ಹೌದಲ್ಲೊ ?

ಸದಾ— ಏನ ಹೇಳ್ತೇನಿ, ನೀ ಬ್ಯಾಡಾ ಅಂದ್ರೂ ಹೋದನ! ಒರ್ಗಿ ಮನೀಗೆ ಈಗ್ಲೇ ಹೀಂಗ ಆದಮ್ಯಾಲೆ ಮುಂದೆ ಹ್ಯಾಂಗಾದೀತು? ಅಲ್ಲಾ, ಅಂಥಾ ಯಾವ ಮಹಾ ಕಾರ್ಯಕ್ಕ ಹೋಗ್ಯಾನ ಈಗ?

ಕಾವೇರಿ— ಸುಳ್ಳೆ ನೀವು ಅಂವ ಬಂದ ಮ್ಯಾಲೆ ಬಯ್ಯಕೋತ ಕೂಡ ಬ್ಯಾಡ್ರಿ ಹುಡುಗರು, ಅವಕ್ಕೇನು ತಿಳೀತದ? ಈ ವಯಸ್ಸಿನಾಗಲ್ದ ಮತ್ತೆ ಯಾವಾಗ—

ಸದಾ— ಅಲ್ಲೆ, ಅಂವ ಯಾಕ ಹೋದಾ, ಅನ್ನೂದೂ ನಿನಗೆ ಗೊತ್ತಿಲ್ಲೇನು? ಯೋಗ್ಯ ಕಾರಣ ಇದ್ದು ಹೋದ ಅಂದ್ರೆ ನಾನಾರ ಯಾಕ ಬಯ್ತೇನಿ?

ಕಾವೇರಿ— ಅವನ ಸಾಲಿಯಾಗ ಇಂದ ಮ್ಯಾಚ ಅದ ಅಂತೆ ಉಂಡವನೇ ಓಡಿಹೋದ

ಸದಾ—ಹೀಂಗೆ ಹೋಗ್ಲಿ ಬಿಡು ಈಗ ಹುಡುಗ ಆಗಿದ್ದಾಗ ಸಿಗು ಸುಖ ಉಣ್ಣಲಿ ದೊಡ್ಡವ ಆದ ಅಂದ್ರೆ, ಏನ ಹೇಳ್ತೇನಿ? ಮದವೀ ಮಾಡಕೊಂಬೂದು,ನೌಕರಿ ಮಾಡೋದು, ಗಾಳಕ್ಕೆ ಸಿಕ್ಕ ಮೀನಿನ್ಹಾಂಗ ಸಂಸಾರದಾಗ ಒದ್ದ್ಯಾಡೂದು ಅವನಪ್ಪಗೂ ತಪ್ಪಲಿಲ್ಲ ಅಂದ ಮ್ಯಾಲೆ ಅಂವ ಗೇನು ತಪ್ಪೀತು? ಏನ ಹೇಳ್ತೇನಿ

ಕಾವೇರಿ-ತಪ್ಪಿಸಿಕೊಳ್ಳು ಶಕ್ತಿ ಇದ್ರೆ ಪೂರಾತಪ್ಪದಿದ್ರೂ ಸ್ವಲ್ಪಾದ್ರೂತಪ್ತದ ಶಾಮು ಏನ ನಿಮ್ಹಾಂಗ ಆಗುದಿಲ್ಲ ಬಿಡ್ರಿ ಅಂವ ಆಫಿಸರ ಆಗ್ತಾನ ಮಂದೀನ್ನ ದುಡಸಿಕೋತಾನೆ ವಿನಾ ತಾ ದುಡಿಯೂದಿಲ್ಲ ಎರಡೂ ಕೈಲೆ ಸುಖಾ ಉಣ್ತಾನ ಅಂತ ಅವನ ಜಾತಕದಾಗ ಸ್ಪಷ್ಟ ಬರದದ ಅಂತ ಜೋಯಿಸ್ರು ಹೇಳಲಿಲ್ಲೇನು?

ಸದಾ— ಆತ ಆತು ಜೋಯಿಸ್ರು ಹೇಳಿದೆಲ್ಲ ಖರೆ ಆದ್ರ ತೀರೇ ಹೋತು ಒಂದು ವ್ಯಾಳ್ಯೆ ಖರೆ ಆತು ಅನ್ನ ಆಗ್ಲಲಾ ಏನ ಹೇಳ್ತೇನಿ ನಾ ಬ್ಯಾಡಂತೆನೇನು? ಶ್ಯಾಮುಆಫೀಸರ ಆದ ಅಂದ್ರೆ,ಆಫೀಸರನ ತಂದೆ ಅಂತ ಅವನ ಕೈ ತಳಗಿನವರು ನನಗೂ ಸಲಾಮು ಹೊಡದಾರು ಏನ ಹೇಳ್ತೇನಿ ನಶೀಬದಾಗ ನನ್ನ ಮಂದೀಗೆ ಸಲಾಮು ಹೊಡಿಯೂದು ತಪ್ಪಲಿಲ್ಲ ಅಂತೂ ಮಗನ ನಶೀಬದಿಂದಾದ್ರೂ ಮಂದಿಕಡಿಂದ

ಸಲಾಮು ಸಿಗಲಿ ಆ ವರೆ ಎಲಾ ಏನ ಹೇಳ್ತೇನಿ ಮಾತು ಮರನೇ ಒಟ್ಟೆ... ಷ್ಟು! ಷ್ಟು! ಏನ ಹೇಳ್ತೇನಿ ಮಾತಿನಲ್ಲಿ ಕೈಲಾಸ, ಮನೀ ಗಂಡಗ ಉಪವಾಸಾ ಒಸ್ನೋ ಹಾಂಗ ಮಾಡಿದಿಯಲ್ಲ? ಒಂದಿಷ್ಟು ಚಾ ಮಾಡು ನೀರು ತುಂಬ್ಲಿಕ್ಕ ನಿನಗೂ ಹುರುಪು ಬಂದಿತು

ಕಾವೇರಿ— ಸುಳ್ಳೇ ಏನಾದ್ರು ಯಾಕಂತೀರಿ ? ಚಾದ್ದ ಚಟಾ ಆಗ್ಯದ, ಮಾಡಿಕೊಡು ಅನ್ನಬಾರ್ದ ನನಗಾದ್ರು ಏನು ? ದುಡದು ತರವ್ರು ನೀವು ನೀವು ಅಂದಮ್ಯಾಲೆ ಮಾಡಿಕೊಡದಿದ್ರ ಹ್ಯಾಂಗ ? ಅಯ್ಯ ! ಸ್ಟೋವಿನಾಗ ಎಣ್ಣೀನೆ ಇಲ್ಲ, ಅಷ್ಟು ಚಿಮಣಿ ಎಣ್ಣಿ ಬಾಟ್ಲಿ ತಂದು ಕೊಡ್ತೀರೇನು ?

ಸದಾ— ಹುಂ (ಕಾವೇರಿ ಒಮ್ಮಿಂದೊಮ್ಮೆ ನಕ್ಕಿದ್ದು ಕೇಳಿಸುವದು) ಎಲಾ, ಏನ ಹೇಳ್ತೇನಿ ಇದೇನು ಹಿಸ್ಟೇರಿಯಾ ಆದವರ್ಹಾಂಗ–

ಕಾವೇರಿ— ಏನದು ಹಾಂಗಂದ್ರ ?

ಸದಾ— ಹಿಸ್ಟೀರಿಯಾ ಅಂದ್ರ ಒಂದು ರೋಗ ಅದ ಆದವ್ರು ಮೈಮ್ಯಾಲೆ ದೆವ್ವ ಬಂದವ್ರು ಮಾಡ್ತಾರಲ್ಲ ಹಾಂಗ ಹುಚ್ಚುಚ್ಚಾರ ಮಾಡ್ತಾರ ನೀ ಈಗ ನಕ್ಕಿಯಲ್ಲ! ಏನ ಹೇಳ್ತೇನಿ, ಹಾಂಗ ಖಿಸಕ್ಕನೆ ನಗ್ತಾರ ಏನ ಹೇಳ್ತೇನಿ, ಚಿಮಣಿ ಎಣ್ಣಿ ಕೊಡಂದಿ, ಖಿಸಕ್ ಅಂತ ನಕ್ಕಿ ಏನ ಸಂಬಂಧ, ಏನ ಹೇಳ್ತೇನಿ

ಕಾವೇರಿ— ಅದs ? ನಿಮ್ಮ ಗಂಡಸರ ರೀತಿ ಯಾವ ಹೆಂಗಸಿಗೂ ತಿಳೀ ವ್ಹಾಂಗಿಲ್ಲ ಬಿಡ್ರಿ ಮಟಮಟ ಮಧ್ಯಾಹ್ನದಾಗ ಸುಮ್ಮನೆ ಬಿದ್ದು ಕೊಳ್ಳೂದು ಬಿಟ್ಟು ಬ್ಯಾರೆ ಕೆಲಸ ಏನೂ ಇಲ್ಲದವ್ರ ಹಾಂಗ ಹಾಲಿನ ಲೆಕ್ಕ ಮಾಡ್ಲಿಕ್ಕೆ ಏನ ಕುಂತರಿ ? ಆ ಲೆಕ್ಕ ಮಾಡ್ಲಿಕ್ಕೆ ಬರದೆ ಚಾ ಬೇಕು ಅಂತ ಏನ ಅಂದ್ರಿ ? ನಗೀ ಬರ್ದ ಏನ ಮಾಡೀತು ? (ಸ್ಟೋವ್ದ ಸಪ್ಪಳ ಕೇಳಿಬರುವದು )

ಸದಾ— ಬಂದೀತು ಬಂದೀತು ಮನಿಯಾಗ ಕುಂತು ಪಂಟು ಹೋಡೀ ತೀರಿ ತೀರ್ತು ಅಲ್ಲ, ಏನ ಹೇಳ್ತೇನಿ, ಕಾಲೇಜಿನಾಗ ಫಸ್ಟ ಕ್ಲಾಸ ದಾಗ ಫಸ್ಟ ಬಂದ ತಲೀಕೊಡ ಈ ವ್ಯಾಪಹಚ್ಚಿಕೊಂಡ ಮ್ಯಾಲೆ ಜಂಗ ಹಿಡ್ದು ಹೋಗ್ತದ. ನಾವಂತೂ ಹೇಳಿ ಕೇಳಿ ಥರ್ಡಕ್ಲಾಸಿ

ನವ್ರು ಏನ ಹೇಳ್ತೇನಿ ಇನು ಅಂದ್ರ ಏನಂದ ತಿಳಿದೀದಿ ? ಮಹಾ
ಮಹಾ ನಾ-ಸೀ ಅನ್ನವರು ಇವಕ್ಕೆ ಸಂಸಾರ ಸಾಗರ ಅಂದಾರ
ತಿಳೀತ ? ಸಾಗರ ಇದು-ಮಹಾ ಸಾಗರ ! ಈಸಂವ ಏನಂತ,
ಎಷ್ಟಂತ ಈಸಿಯಾನು ? ಏನ ಹೇಳ್ತೇನಿ, ಬ್ಯಾಡಾ, ಸಾಕಮಾರು
ಈಸಿಯಾನು ಅದೂಬ್ಯಾಡಾ, ಗಂಡಗಲಿ ಲಸ್ನ ಸ ಸಾಕ ವ್ಯೈಲು
ಈಸ್ಯಾನು? ಮುಂದ ಕೈಸೋತು ಸಸ್ಟಾಂಗ ಆಗೂದೇ

ಕಾವೇರಿ— ಬಡ್ರಿ ನೀವೇನು ಈಗ ಸೋಲಿರಿ ? ಅಂಥಾದ್ದೇನಾಗ್ಯದ?

ಸದಾ— ಪಾತ್ತೆ ಏನಹೇಳ್ತೇನಿ, ಒಂದ ರೀತಿಯಿಂದ ನೀ ಅಂಬುದು ಖರೇ
ಹಾಂಗ ನೋಡಿದ್ರ ಏನೂ ಆಗಿಲ್ಲ ಆಫೀಸನಾಗ ಎಲ್ರೂ ಅಂತಾರ
ಸದಾನಂದರಾಯ್ರು ಏನ್ರಪಾ, ಚಲೋ ನೋಕರಿ ಅದ ತಿಂಗಳಾ
೧೨೦ ರೂಪಾಯಿ ಕೈತುಂಬಾ ಒರ್‍ತಾವ, ಮನಿಯಾಗ ಹೆಂಡ್ತಿ,
ಮಗ ಇಬ್ರೇ ಭಾಗ್ಯ ಅದ ಅಂತಾರ ಅವ್ರ ಏನ ಹೇಳ್ತೇನಿ, ಅವರೀ
ಗೇನು ಗೊತ್ತು ಕಥಿ ? ನಾ ಮ್ಯಾಥಮ್ಯಾಟಿಕ್ಸ್ ಅಂದ್ರ ಗಣಿತ
ತಗೊಂಡು ಬಿ ಎ ಪಾಸಾಗೇನಿ ಖರೆ ಅದ ಆದ್ರ ಏನ ಹೇಳ್ತೇನಿ,
ಈಗ ನಿನ್ನ ಹಾಲಿನ ಲೆಕ್ಕಮಾಡಬೇಕಾದ್ರ ಚಾ ಕುದ್ದು ಮಿದುಳು
ಚುರುಕು ಮಾಡಿಕೊಳ್ಳೊ ಪ್ರಸಂಗ ಒಂದದ

ಕಾವೇರಿ— ನಾ ಥಡ್ಡ ಅಂತ ನಸ್ಮುಂದೆ ಅಂದ್ರಿ ನಾ ಮಂಗಲಸೂತ್ರ
ಕಟ್ಟಿಸಿಕೊಂಡೇನಿ ನಿಮ್ಮ ಕೈಲ ಈಗ ನೀವು ಥಡ್ಡಾದ್ರೊ ಶ್ಯಾಣ್ಯಾ
ಅಂತ ನಾ ಅನ್ನಬೇಕಾಗ್ತದ ಆದ್ರೆ ಹೀಂಗ ಮಂದೀ ಮುಂದ
ಅಂದ್ರಿ ಅಂದ್ರ ನಗಸಿಕೋಳ್ಳಿ ತೀರ್‍ತು

ಸದಾ— ನಕ್ಕರ ನಗ್ತಾರ ಏನಾದು ಬಿಡು ! ಅಥವಾ ಏನ ಹೇಳ್ತೇನಿ,
ಯಾಕೆ ನಗ್ತಾರ? ಎಲ್ಲರ ಮನಿ ಮೋಸೇಗೂ ತೂತ ಇರ್‍ತಾವ ನನಗೆ
ಹಾಲಿನ ಲೆಕ್ಕ ತಿಳಿಯೂದಿಲ್ಲ ನನ್ನ ನೋಡಿ ನಗವಂಗ ಮೊಸರಿನ
ಲೆಕ್ಕ ತಿಳಿಯೂದಿಲ್ಲ (ನಿಟ್ಟೀಪ ನಪ್ಪಳ ಸಿಲ್ಲಿಪದು) ತಡಿ, ತಡಿ
ಇನ್ನೊಂದಿಷ್ಟು 'ಕಣ್' ಇಳ್ಟು ಚಾ ಸ್ವಾಂಗ ತಗ್ಲಿ ಇಲ್ಲಾಂದ್ರ,-
ಏನೇ ಒಂದು ಮಾತು, ಏನಹೇಳ್ತೇನಿ, ಖರೇ ಹೇಳ್ಯಾ ? ನಮ್ಮ
ಭಾರತದಂಥಾ ಒಂದು ದೊಡ್ಡ ರಾಷ್ಟ್ರದ ಮುಂಗಡ ಪತ್ರ ತಯಾರ್‍ಸ

ಬಹುದು ಆದರೆ ನಮ್ಮಂಥ ಮಧ್ಯಮ ವರ್ಗದ ಒಂದು ಕುಟುಂಬದ ಹಿಂಗಡ ಪತ್ರ ತಯಾರ್ಸೂದು ಅಂದ್ರ (ಸದಾನಂದರಾಯ್ರಿ, ಸದಾನಂದರಾಯ್ರಿ ಎಂಬ ಕೂಗು) ಯಾರು! ಓಹೋ, ಚನ್ನಪ್ಪನ ಪ್ರೇನು? ಬರ್ರಿ, ಬರ್ರಿ, ಕೂಡ್ರಿ ತಗೊಳ್ರಿ

ಚನ್ನಪ್ಪ — ಇದೇನ್ರಿ? ಈ ಹೊತ್ತಿನಾಗ ಚಾ ಮಾಡಸೀರಿ? ಅಲ್ರಿ, ಇಂದ ಬಸಪ್ಪನವರ ಚಾ ಪಾರ್ಟಿ ಅದ ಹೆಡ್‌ಕ್ಲಾರ್ಕರ ಚಾ ಪಾರ್ಟಿ. ಅಂದ್ರ ಏನಾದ್ರೂ ವಿಶೇಷ ಇದ್ದೇ ಇರ್ತದ ರಾಯ್ರೆ ಛಾನ್ಸ ಬಂದಾಗ ಬಿಡಬಾರದ್ರಿ ಅಲ್ಲಿಗೆ ಹೋಗೂದರೊಳಗೆ ಹೀಂಗ ಇಪ್ಪತ್ತು ಸಲ ಚಾ ಕುಡದು ಹೋದ್ರ ಹ್ಯಾಂಗಾದೀತು? ಹೋಗೂದಾದ್ರೂ ಯಾಕ? ಖರೇ ಅಂದ್ರ ಇಂಥಾ ಹೊತ್ತಿನಾಗ ಹೊಟ್ಟೆ ಖಾಲಿ ಇಟಗೊಂಡು ಹೋಗ್ಬೇಕು ಅಗದೀ ಖರೇ ಅಂದ್ರ ಎಣಗಾಯಿ ಪಲ್ಯಾ ಬೇಷಿದ್ರೂ ನಾ ಇಂದ ಒಂದೇ ರೊಟ್ಟಿ ಉಂಡ ಕುಂತೇನಿ ದಿನಾ ದಿನಾ ಹೆಡ್‌ಕ್ಲಾರ್ಕರೀಗ ವರ್ಗ ಆಗೂದು, ಇಂಥಾ ಪಾರ್ಟಿ ಸಿಗೂದು ಅಷ್ಟರಾಗೇ ಅದೆ ಹೌದಂತೀರೋ ಇಲ್ಲೊ? ಖರೇ ಅಂದ್ರೆ.–

ಸದಾ — ಹ್ಹೊ–ಹ್ಹೊ–ಹ್ಹೊ, ಭೇಷ್ ಏನ ಹೇಳ್ತೇನಿ, ಭೇಷರಪಾ. ನಿಮ್ಮ ತಲಿಯಾಗ ಇಂಥಾ ಮಾತು ಹ್ಯಾಂಗ ಹೊಳೀತಾವ ಅಂತೇನಿ ಮತ್ತೆ ಏನಾತು ಅಂದ್ರ– ನಾಳೆ ಪಗಾರ ಬರೂದಿನ ನಮ್ಮ ಹಿಂಗಡ ಪತ್ರ ತಯಾರ್ಸಿ ಇಟಗೊಂಬೂಣ ಅಂತ ಊಟಾದಮ್ಯಾಲೆ ಮಲಗಲೇ ಇಲ್ಲ ಆದ್ರೆ ಪ್ರಥಮ ಗ್ರಾಸೇ ಅಂತಾರಲ್ಲ— ಹಾಂಗ ಹಾಲಿನ ಲೆಕ್ಕಾನೇ ಬಗೀ ಹರೀಲಿಲ್ಲ ಅದಕ್ಕೆ ಏನ ಹೇಳ್ತೇನಿ, ಚಾ ಕುಡ್ದು

ಚನ್ನಪ್ಪ— ತಲೀ ಸರಿ ಮಾಡಿಕೊಳ್ಬೇಕು ಅಂತೀರೇನು? ಖರೇ ಅಂದ್ರ— ಊಟಾದ ಕೂಡ್ಲೆ ನೀವು ಲೆಕ್ಕಾ ಮಾಡ್ಲಿಕ್ಕೇ ಕೂಡ್ರಬಾರದಿತ್ತು. ಅಲ್ರಿ, ಉಂಡಮ್ಯಾಲೆ ತಲಿ ಮಬ್ಬ ಹಿಡದಿರ್ತದ ಛಾಕ್ಕ, ಪಾಕ್ಕ ಜಗ್ಗೂದಿಲ್ಲದು

ಸದಾ—ನೀವಂದದ್ದು ಖರೇ ಅಂತ ಕಾಣಸ್ತದ

ಚನ್ನಪ್ಪ—ಅಲ್ರಿ, ಮತ್ತೆ ಖರೇ ಅಂದ್ರ ಇದೇನ ಭಾನಗಡಿ ನಡಿಸೀರಿ ನೀವು? ಈ ಡೆಮಾಕ್ರಸಿ ಬಂದಾಗಿಂದ ಮುಂಗಡಪತ್ರ, ಬಜಟ್ ಅನ್ನೂದನ್ನ

ಕೇಳೇನಿ ಸರಪ್ಲಸ್ ಬಜೆಟ್, ಡೆಫಿಸಿಟ್ ಬಜಟ್ ಅನ್ನೂ ಶಬ್ದ ಕಿವಿಗ ಬಿದ್ದಾವ ಹಾಂಗಂದ್ರ, ಖರೇ ಅಂದ್ರ–ನರಿಯಾಗಿ ತಿಳಿದಿದ್ರೂ ತಿಳೀತು ಅನ್ನವ್ಹಾಂಗ ಅನಸ್ತದ ಆದ್ರ ಅದರಾಗ ನಿಮ್ಮದೊಂದು ಬ್ಯಾರೆ ತಗದೀರಲ್ಲ? "ಹಿಂಗಡ ವತ್ರ" ! ಹೇಳ್ರಿವಾ, ನಮಗಷ್ಟು ಮಂದೀ ಮುಂದ ಪ್ರಸಂಗ ಬಂದಾಗ ನಾವೂ ಈ ಮಾತ ಅಂದ್ರ, ಇಕೊನೊಮಿಸ್ಟ ಅನ್ನೂ ಟಾಯಟಲ್ ಆದ್ರೂ ಬಂದೀತು ಖರೇ ಅಂದ್ರ

ಸದಾ— ಇದೇನ್ರ ಹೊಸತಲ್ರಿ ಏನ ಹೇಳ್ತೇನಿ ನೌಕರರು ಅನ್ನೂ ಜಾತೀಗೆಲ್ಲ ಹೆಚ್ಚಾಗಿ 'ಹಿಂಗಡವತ್ರ'ದ ಅನಭವ ಆಗಿರ್ತದ ಭಾಳ ಅಂದ್ರ, ಏನ ಹೇಳ್ತೇನಿ, ಅನಭವಕ್ಕೆ ಬಂದ್ರೂ ಹೆಸರು ಗೊತ್ತಿರಲಿಕ್ಕಿಲ್ಲ

ಚಿನ್ನಪ್ಪ— ಅದೇ ಹೇಳ್ರಲಾ ನೋಡೋಣ

ಸದಾ— ನೋಡ್ರಿ, ನಮಗೆ ವಗಾರ ಬರೂದು ೧ನೇ ತಾರೀಖಿಗೆ ರೊಕ್ಕ ಕೈಗೆ ಬರೂದು, ತಾನೆರಡು ತಾಸು ಕೈಯಾಗ ಇರೂದು ಆದೊಂದೇ ದಿನ ಹೌದಲ್ಲೊ? ಈ ೧ನೇ ತಾರೀಖಿಗೆ ಬರೂ ವಗಾರು ಒಂದಿನ ತಿಂಗಳದ್ದು ಹೌದಲ್ಲೊ? ಅಂದ್ರ– ಏನ ಹೇಳ್ತೇನಿ ೧ನೇ ತಾರೀಖು ಬರೊತನಕ, ನಮ್ಮ ಚಾ, ಕಾಳು–ಕಡಿ, ಅರವಿ–ಅಂಚಡಿ,, ಹಾಲು ಮೊಸರು, ಸಾಬೂನು, ಹಜಾಮತಿ, ಡಾಕ್ಟರು ಎಲ್ಲಾನೂ ಉದ್ರಿ ನಡದಿರತದ ಮತ್ತೆ ಏನ ಹೇಳ್ತೇನಿ ತಿಂಗಳಾ ಕೈಗೆ ಬರೂ ವಗಾರು ಒಂದೇ ಲೆಕ್ಕದ್ದಿರ್ತದ ಆದ್ರೆ ಈ ಉದ್ರಿ ವ್ಯವಹಾರ ಮಾತ್ರ ಮತಿ ಬಂದ ಹಾಂಗ ಕೂಡಿ ಹಿಡೀತೇನಿ ಅಂತದ ಇಂದ ಸೀಕಾಯ್ತು, ನಾಳೆ ನೆಂಟರು ಬಂದ್ರು, ಏನ ಹೇಳ್ತೇನಿ, ಛಲೋ ಸಿನೆಮಾ ಬಂತು! ಹೀಂಗ ಸಂಸಾರದಾಗ ಮಳೀ ಬರೂದೇ ಹೆಚ್ಚು ಹೀಗಾಗಿ ವಗಾರ ನೂರಾದ್ರ ಉದ್ರಿ ವ್ಯವಹಾರ ನೂರಿಪ್ಪತ್ತೂ, ನೂರ್ಮೂವತ್ತೂ ಆಗಿರ್ತದ ಆಗ ಹ್ಯಾಂಗ? ಏನ ಹೇಳ್ತೇನಿ, ಅದಕೇ ಈ ಹಿಂಗಡ ವತ್ರ ತಯಾರಿಸ ಬೇಕಾಗ್ತದ ಪಗಾರ ಬರೂ ಮೊದಲನೇ ದಿನಾ ಕುಂತು ಯಾರ್‍ಯಾರ ಉದ್ರಿ ಎಷ್ಟಷ್ಟದ ಅಂತ ಮೊದಲೀಗೆ ಲೆಕ್ಕಾ ತಗಿಯೂದು ಆ ಮ್ಯಾಲೆ ಯಾರ್‍ಯಾರ ಬಾಕಿ ಎಷ್ಟೆಷ್ಟು ತೀರಿಸಬೇಕು, ಯಾರೀಗ

ಅವುಟ ಕೊಡಗಿದ್ರೊ ನಡೀತವ, ಹೀಂಗೆಲ್ಲಾ ಲೆಕ್ಕ ಹಾಕಿ ಅನುವು-ಆಪತ್ತಗಿರ್ಲಿ ಅಂತ ಕೈಯಾಗ ನಾಕೆಂಟಾಣೆನಾದ್ರೂ ಉಳಿಸಿಗೊಬೇಕು ಇಂಥ ಲೆಕ್ಕದ ಪತ್ರಕ್ಕೆ ಏನ ಹೇಳ್ತೇನಿ, ಹಿಂಗಡ ಪತ್ರ ಅಂತ ನಾ ಅಂತೇನಿ

ಚನ್ನಪ್ಪ— ಖರೇಅಂದ್ರ, ನೀವಂದದ್ದು ಹದಿನಾರಾಣೆ ಖರೇಮಾತು ಆದರಿ ಇದಕ್ಕೆ ಹಿಂಗಡ ಅಂತ

ಸದಾ— ಏನಹೇಳ್ತೇನಿ, ನಿಮ್ಮ ತಲಿ ನುಪೀಕ ತಲಿಅಂತ ಆಗಳೆ ಅಂದಿದ್ದು ಹಿಂದಕೆ ತಗೋತೇನ್ರವಾ ಇಷ್ಟು ಹೇಳಿದ ಮ್ಯಾಲೂ ತಿಳೀದಿದ್ರ ಮತ್ತೇನು ಮಾಡ್ಲಿ ? ಅಲ್ರಿ, ಏನ ಹೇಳ್ತೇನಿ, ಮುಂಗಡಪತ್ರ ಅಂತ ಯಾಕ ಅಂತಾರ ?

ಚನ್ನಪ್ಪ— ಮುಂದೆ ಬರೂ ಉತ್ಪನ್ನ ಮತ್ತ ಖರ್ಚು ಇದರ ಅಂದಾಜು ಲೆಕ್ಕ ತಗಿಯೂದಕ್ಕ ಮುಂಗಡಪತ್ರ ಅಂತಾರ

ಸದಾ— ಹಂ ! ಅದಕೇ ನಮ್ದು ಹಿಂಗಡಪತ್ರ ಅನ್ನೂದು ನಾವು ಮುಂದಿನ ಉತ್ಪನ್ನ, ಖರ್ಚು ಅಲ್ಲ, ಹಿಂದಿನ ಉತ್ಪನ್ನ ಖರ್ಚು ತಗೀವವ್ರು ಮುಂದಿಂದು ಮುಂಗಡ, ಹಿಂದಿಂದು ಹಿಂಗಡ ಏನ ಹೇಳ್ತೇನಿ ಇನ್ನೂ ವಿಚಾರಮಾಡ್ತು ಅಂದ್ರ, ಹಿಂದಿನ ಕಡ ಅಂದ್ರೆ ಹೋದ ತಿಂಗಳ ಮಾಡಿದ ಸಾಲದ ಲೆಕ್ಕ ತಗಿಯೂ ಪತ್ರ ನಮ್ದು ಹಿಂಗಡ ಪತ್ರ, ಹೌದಲ್ಲೋ, ಏನ ಹೇಳ್ತೇನಿ

ಚನ್ನಪ್ಪ— (ಚಪ್ಪಾಳಿ ತಟ್ಟಿ) ಹಿಯರ್, ಹಿಯರ್, ಏನ್ರಪಾ ಖರೇ ಅಂದ್ರ ನೀವು ಫಾಯನಾನ್ಸ ಮಿನಿಸ್ಟರ ಆಗಬೇಕಿತ್ರಿ ಅಂದ್ರ ಹಿಂಗಡ ಪತ್ರ ವ್ಹಾ, ವ್ಹಾ, ಫ್ಯಾನ್ ! ಬ್ಯೂಟಿಫುಲ್ ! ಎಲಾ ಮೂರು ಹೊಡೆದು ಹೋತು ಎಳ್ರಿನ್ನು ಕೋಟ ಹಾಕ್ರಿ, ಖರೇ ಅಂದ್ರ, ತಡಾಮಾಡಿ ಹೋದ್ರ ಬರೇಚಾಕ್ಕ ಬಂದ್ರು ಮಕ್ಳು ಅಂತ ಅನಸಿಗೋಬೇಕಾದೀತು

ಸದಾ— (ನಕ್ಕು) ಏನ ಹೇಳ್ತೇನಿ ನೋಡ್ರಿ, ಸತ್ಯಕ್ಕೆ ಮಹತ್ವ ಕೊಡ ಬೇಕು ಅಂತಾರ ಸತ್ಯಂವದ, ಸತ್ಯಂಚರ ಬರೋಬರಿ ಆದರೆ ಸತ್ಯದಂತೆ ನಡಕೊಂಡ್ರೆ ಹೆಸರಿಡ್ತಾರ ಅಂ ! ಏನ ಹೇಳ್ತೇನಿ,

ಖರೇಅಂದ್ರ, ನಾನು, ನೀವು, ಮತ್ತೆ ಪಾರ್ಟಿಗೆ ಒರವ್ರೆಲ್ಲಾ ಬಸಪ್ಪ ನವ್ರನ್ನ ಬೀಳ್ಕೊಡೂ ಸಮಾರಂಭಕ್ಕೇ ಅಂತ ಹೋಗವ್ರಲ್ಲ ಚಾ ಪಾರ್ಟಿ ಅದ ಅಂತ ಬರವ್ರು, ಬರೇ ನಾಕ ಮಾತ ಹೇಳ ಹಾರ ಹಾಕ್ತೇವಿ ಅಂತ ಅಂದ್ರ ಖುದ್ದ ಬಸಪ್ಪನವರಾದ್ರೂ ಬರ್ತಿದ್ರೊ ಇಲ್ಲೋ ? ಹಾಂಗಂತಂದು, ಏನ ಹೇಳ್ತೇನಿ, ಬರೇ ಚಾ ಅವ ಅಂತ ಬಂದ್ವಿ ಅಂದ್ರ ನೀವಂದ್ಹಾಂಗ ಚಾಕ್ಕ ಬಂದ ಮಕ್ಳು ಅಂತ ಅನಸಿ ಗೋಬೇಕಾಗ್ತದ

ಚನ್ನಪ್ಪ— ಖರೇ ಖರೇ ಖರೇಅಂದ್ರ ಓದವಾಗ ಪುರಾಣಾನೇ ಓದ್ಬೇಕು ತಿನ್ನವಾಗ ಬದನೇಕಾಯ್ನ ತಿನ್ಬೇಕು ! ಅಂದ್ರs ಸ್ವಾರಸ್ಯ ಹುಂ ಏಳ್ರಿನ್ನ ಮೂರುವರಿ ಆತು ಎಲಾ ಏನಿದು ? ಮತ್ತೂ ಒಬ್ರು ಜೊತೆಗೂಡಿದ್ರಲ್ಲಾ ಬರ್ರಿ ಗೋವಿಂದಪ್ಪನವ್ರೆ, ಬರ್ರಿ ಚಾ ಪಾರ್ಟಿಗೆ ಹೊಂಟಿರೇನು ? ಖರೇಅಂದ್ರ, ನಿಮ್ಮನಿಯಿಂದ ಸೀದಾ ರಸ್ತೇಲಿ ಹೋಗೂದು ಬಿಟ್ಟು ಹೀಂಗ ಸುತ್ತಹಾಕಿ ಯಾಕ ಬಂದ್ರಿ ? ದೇಹಕ್ಕೆ ಛಲೋ ಬಿಸಲು ಕಾಯಿಸೋಣ ಅಂತ- ಖರೇಲಂದ್ರ

ಗೋವಿಂದ— (ಉಸ್ ! ಎಂದು ಕುಳಿತು) ಚ್ಯಾಷ್ಟಿ ಮಾಡಬ್ಯಾಡ್ರಪಾ ಮೊದಲೇ ನಾಕಾಗ್ಯದ

ಸದಾ — ಸಾಕಾದ್ರೂ ಕೂಡ್ರವ್ಹಾಂಗಿಲ್ಲ ಬರಾಬರಿ ನಾಕಕ್ಕೆ ಹೋಗ್ಬೇಕು ಏನ ಹೇಳ್ತೇನಿ, ಫೋರ್ ಪಿ ಎಂ ಶಾರ್ಪ ಅಂತ ಆಮಂತ್ರಣ ಕೊಟ್ಟಾರ ಬರ್ರಿ, ಪಾರ್ಟಿ ತಯಾರಿ ಭೇಷ ಅದ ಅಂತ ಕೇಳೇನಿ ಹೋದಕೂಡ್ಲೆ ಬೇಕಾದ್ರೆ

ಗೋವಿಂದ— ತಿನ್ರಿ ತಿನ್ರಿ ಮನಸಿನೊಳಗೆ ಮಂಡಗಿ ತಿಂದ್ರ ಗೋದಿಲೆಕ್ಕಾ ಕೊಡವ್ರು ಯಾರು ಅಂತ ಯಾಕೆ ಗಾದಿ ಮಾತು ಮಾಡ್ಯಾರ ಅನ್ನೂದು ಈವತ್ತು ನನಗೆ ತಿಳೀತು ಕೋಟ ತಗೀರಿ, ಒಂದಿಷ್ಟು ಥಣ್ಣನ್ನ ನೀರು ಕೊಡ್ರಿ ಕುಡೀಲಿಕ್ಕೆ

ಚನ್ನಪ್ಪ— ತರ್ರಿ ತಂಬಿಗೆಯೊಳಗೇ ತಗೊಂಡು ಬರ್ರಿ ಖರೇಅಂದ್ರ ಕೆಟ್ಟ ಬಿಸಲು ತಲೀಗೆ ಬಡದದ ಅಂತ ಕಾಣಸ್ತದ

ಸದಾ— ತಗೊಳ್ರಿ ಗೋವಿಂದಪ್ಪನವರ, ಆರಾಮಾತ ಇನ್ನ ಹೊಂಡೋಣೇನು ?

ಗೋವಿಂದ— ಕೋಟ ತಗೀರಿ ಇಂವ ಪಾರ್ಟಿ ಇಲ್ಲ ರದ್ದಾತು

ಸದಾ— ಅಂ ! ಏನ ಹೇಳ್ತೀನಿ?

ಚನ್ನಪ್ಪ— ಖರೇಅಂದ್ರ

ಗೋವಿಂದ—ಹೌದು ಖರೇಅಂದ್ರ ಚಾಪಾರ್ಟಿ ರದ್ದಾತು ಅಂತ ಹೇಳ್ತೀನಿ ನೀರು ಹೂಜಿಯಾಗಿಂದೇನು ? ಭಾಳ ಧಣ್ಣಗ ಆಯಿಸ್ ಇದ್ದಾಂಗ ಅದ ಇನ್ನೊಂದು ಲೋಟಾಕೊಡ್ರಿ ಕೂಡ್ರಿ ಏನವಸರ ಇಲ್ಲ ಹೇಳಲ್ಯಾ ಅದರ ಕಥೀನ ನಿನ್ನೆ ಆಫೀಸು ಬಿಡೂ ಮುಂದ ರಾಯ್ರು ನನ್ನ ಕರ್ದು "ಗೋವಿಂದಪ್ಪನವ್ರ, ನಾಳನ ಜವಾಬ್ದಾರಿ ನಿಮ್ದು ನೀವೇ ಯಜಮಾನ್ರು ವ್ಯವಸ್ಥಾ ಸರಿಯಾಗಿ ಆಗ್ಬೇಕು" ಅಂದ್ರು ಹುಂ ಅಂದೆ ಯಾಕ ಅಂತೀರಿ ? ಯಜಮಾನ ಅಂದ ಮ್ಯಾಲ ನಮ್ಮದೇ ಕಾರಭಾರ ನಮ್ಮದೇ ಬಡಸೂ ಕೈ ದೇವರ ಪ್ರಸಾದ ಬ್ಯಾರೆ, ಕದ್ದ ಪ್ರಸಾದ ಬ್ಯಾರೆ ಅಂತ ಅಂದ್ಹಾಂಗ ನಾವೂ ಸರಿಯಾಗಿ ತಿಂದು ಮನೀಗೆ ಹೋಗುವಾಗ ಹುಡುಗ್ರೀಗೆ ಅಂತ ನಾಕಾರು ಫೇಡೆನಾದ್ರೂ ಒಯ್ಯಲಿಕ್ಕೆ ಬಂದೀತು ಅಂತ ಮಾಡಿ ರಾಯ್ರು ಮಾತೀಗೆ ಒಪ್ಕೊಂಡೆ

ಚನ್ನಪ್ಪ— ಭೇಷರಪಾ

ಗೋವಿಂದ— ಭೇಷಅಂತ ತಿಳ್ದೀ ಒಪ್ಕೊಂಡೆ ಆದರೆ ಎಲ್ಲಾ ಫೈಸಲಾಗಿ ಹೋತು ಊಟಾ ಮಾಡಿದವನೇ ಸೀದಾ ಹೋಗಿ ಎಲ್ಲಾ ತಯಾರಿ ಮಾಡ್ಲಿಕ್ಕೆ ಶುರುಮಾಡಿದ್ದೆ ಬರಾಬರಿ ಮೂರಕ್ಕೆ ಬಂದನಪಾ ರಾಯ್ರ ಪಟ್ಟೆವಾಲಾ ನಿನ್ನೆ ಮನೀಗೆ ಹೋದಮ್ಯಾಲೆ ರಾಯ್ರಿಗೇನೋ ತುಸಾ ಮೈಬೆಚ್ಚಗಾದ್ಹಾಂಗ ಆತಂತ ಅದಕೇ ಇಂದಿನ ಪಾರ್ಟಿ ಮುಂದಕ್ಕೆ ಹಾಕಿ ನಾಡದು ಇಟ್ಟಾರಂತ ಅಲ್ಲಾ ಬೆಳಗ್ಗೆ ಹೇಳಿ ಕಳಿಸಬೇಕಿತ್ತೋ ಬ್ಯಾಡೋ

ಚನ್ನಪ್ಪ— ತ್ಚು ತ್ಚು —

ಸದಾ— ಏನ ಹೇಳ್ತೀನಿ, ಅಂದ್ರೆ ಮಧ್ಯಾಹ್ನ ಆಗೂದರೊಳಗಾಗಿ ಮೈ ತಣ್ಣಗಾಗಬಹುದು ಅಂತ

ಗೋವಿಂದ— ಇನ್ನೂ ಕೇಳ್ರಿ ನಡವೆ ಬಾಯಿಹಾಕಿ ಏನೇನಾರ ಹೇಳ ಬ್ಯಾಡ್ರಿ ಮನಿಯಾಗ ಆರಾಮ ಕುಂತೀರಿ ನಿಮಗೇನು ಗೊತ್ತು ನನ್ನ ಸುಖಾ ? ಹೊಟೆಲನವಗ ಮುಂಜಾನೇನೇ ತಿಳಿಸಿದ್ರಂತ ಉಳಿದವ್ರೆಲ್ಲಾ ಮಧ್ಯಾಹ್ನ ಹ್ಯಾಂಗೂ ಬರ್ತಾರ ಆಗ ತಿಳಿಸಿದರಾತು ಅಂತ ಬಿಟ್ಟಹಾಂಗ ಕಾಣಸ್ತದ ಎಲ್ಲಾರಿಗೂ ತಿಳಿಸೀಯೊ ಇಲ್ಲೊ ಅಂತ ಪಟ್ಟೇವಾಲಾಗ ಕೇಳ್ದೆ ರಾಯ್ರು ಈ ಚೀಟಿ ನಿಮಗೆ ಕೊಟ್ಟಾರ ನೋಡ್ರಿ ಅಂತ ಅಂವಾ ಅಂದ "ಮಿ ಗೋವಿಂದರಾವ್ ಪ್ಲೀಜ ಇನ್ಫಾರ್ಮ ಅದರ್ಸ, ಥ್ಯಾಂಕ್ಸ" ಅಂತ ರಾಯ್ರು ಬರದಿದ್ರು

ಚನ್ನಪ್ಪ— ಭೇಷ, ಭೇಷ

ಗೋವಿಂದ— ಯಾಕೆ ? ಚ್ಯಾಷ್ಟಿ ಮಾಡ್ತೀರೇನು ? ಬಿಸಲಿನಾಗ ಮನೀ ಮನೀ ಪಿರಿಪಿರಿ ಅಂತ ಅಡ್ಡಾಡಿದ್ರ ನಿಮಗೆ ತಿಳೀತಿತ್ತು

ಚನ್ನಪ್ಪ— ಖರೇಅಂದ್ರ

ಸದಾ— ಹಾಂಗಲ್ಲ ಏನ ಹೇಳ್ತೀನಿ ಚನ್ನಪ್ಪನವ್ರು ಭೇಷ ಅಂದದ್ದು ನಿಮಗೆ ತ್ರಾಸು ಬಂತೂ ಅಂತಲ್ಲ ಹೀಂಗ ತ್ರಾಸಕೊಟ್ಟೊ ಪ್ಲೀಜ್ ಥ್ಯಾಂಕ್ಸ ಅಂತಂದು ಪಾಪ ತೊಳಕೊಂಡವ್ಹಾಂಗ ಮಾಡ್ತಾರಲ್ಲ, ಅದಕೇ ಭೇಷ ಅಂದ್ರು ಏನಹೇಳ್ತೀನಿ ತಪ್ಪು ತಿಳಕೋಬ್ಯಾಡ್ರಿ ಯಾಕ್ರಿ ಚನ್ನಪ್ಪನವರ ?

ಚನ್ನಪ್ಪ— ಹೌದು ಖರೇಅಂದ್ರ ನೀವಂದದ್ದು ಅಗದೀ ಖರೇಅದ

ಗೋವಿಂದ— ದೊಡ್ಡವರ ಮಾತು ಅಂದ್ರ ಹೀಂಗದ ನಮ್ಮಂಥವ್ರೀಗೆ ಮೈಬೆಚ್ಚಗಾಗೂದು ಇರ್ಲಿ ವಿಷಮಜ್ವರ ಬಂದ್ರೂ ಪಾರ್ಟಿ ನಿಲ್ಲಿಸ ತಿದ್ರೇನು ? ಪಟ್ಟೇವಾಲಾಗ ಅಂದೆ, ಮಾರಾಯಾ, ಬಿಸಲು ಸುಡ ತದ ಈಗೆಲ್ಲಿ ನಾ ಎಲ್ಲಾರ ಮನಿ ಅಡ್ಡಾಡಲಿ? ನೀನೇ ಹೋಗಿ ಹೇಳಪ್ಪಾ, ಚಾ ಕುಡೀಲಿಕ್ಕೆ ಬೇಕಾದ್ರೆ ಎರಡಾಣೆ ಕೊಡ್ತೇನಿ ಅಂದೆ ಅಂವ ಎಂಥಾ ಕದೀಮ ! ಹ್ಹೆ-ಹ್ಹೆ ಅಂತ ದೇಶಾವರಿ ನಕ್ಕೋತ ನಿಮ್ಮ ಕೆಲಸ ಮಾಡ್ಲಿಕ್ಕೆ ಚಾಯಾಕ್ರಿ ? ಹಾಂಗೇ ಮಾಡ್ತಿದ್ದೆ ಅದ್ರೆ

ಈಗ ಮ್ಯಾಟನಿ ಸಿನೇಮಾಕ್ಕೆ ಬಾಯಿಸಾಹೇಬ್ರನ್ನ ಕರಕೊಂಡು ಹೋಗಬೇಕಾಗ್ಯದ ಅಂತ ಹೊರಟೇ ಬಿಟ್ಟ

ಚನ್ನಪ್ಪ— ಭೇಷರವಾ ಸದಾನಂದರಾಯ್ರು, ನಾವು ಲಗೂ ಹೋಗಿದ್ರೆ ಖರೇಅಂದ್ರ ಫಜೀತಿ ಪಡತಿದ್ದೆವು ಪಾಪ ! ಗೋವಿಂದಪ್ಪನವರಿಗೆ ಭಾಳ ತ್ರಾಸಾದ್ಹಾಂಗ ಆತು ನಡೀರಿ, ನಾವೂ ಅವರ ಸಂಗಡ ಹೋಗಿ

ಗೋವಿಂದ— ಎಲ್ಲಾರಿಗೂ ಸುದ್ದಿ ಮುಟ್ಟವ್ಹಾಂಗ ಮಾಡಿ ಬಂದೇನ್ರಪಾ

ಸದಾ— ಏನ ಹೇಳ್ತೇನಿ ಹಾಂಗಾದ್ರೆ ಮುಗದ ಹೋತಲಾ ಇನ್ನೇನು ಮಾಡೋಣ ಅಂತೀರಿ ?

ಗೋವಿಂದ— ನನಗಂತೂ ನಾಕಾಗಿ ಹೋಗ್ಯದ ಮನೀಗೆ ಹೊಗ್ತೇನಿ

ಚನ್ನಪ್ಪ— ಖರೇಅಂದ್ರ ನನಗೂ ರೇಶನರ ತರೂದದ ಪಾರ್ಟಿ ಅದ, ನಾಳೆ ತಂದರಾತು ಅಂತ ಬಿಟ್ಟಿದ್ದೆ ಬರ್ರಿ ಗೋವಿಂದಪ್ಪನವರೆ, ಹೋಗೋಣ ಸದಾನಂದರಾಯ್ರು, ಖರೇ ಅಂದ್ರ, ನನಗೂ ಮನೀ ಛೆಕ್ಕ ಬಾಯಿ ಗೂಡಿಸೂದು ತಿಳಿಯೂದಿಲ್ಲ ನಾಳೆ ಆಫೀಸ ಬಿಟ್ಟ ಮ್ಯಾಲೆ ನಮ್ಮನೀಗೆ ಬರ್ರಿ. ಒಂದಿಷ್ಟು ಚಾ ಕೊಡೋಣಂತ ಬೇಕಾದ್ರೆ ನನುಗೂ, ಆಗಂದ್ರಲ್ಲಾ, ನಿಮ್ಮ ಹಿಂಗಡ ಪತ್ರದ ಹಿಕ್ಮತ್ ಅಷ್ಟ ತಿಳಸಬಿಡ್ರಿ

ಗೋವಿಂದ— ಏನ್ರಿ ಅದು ? ಆಫೀಸನಾಗ ಮತ್ತೆ ಅದೇನ ಹೊಡ್ಯಾರ ?

ಚನ್ನಪ್ಪ— ಆಫೀಸಿಂದು ಅಲ್ಲ ಇದು ಸದಾನಂದರಾಯ್ರು ಹಿಂಗಡ ಪತ್ರ, ಆಸಾಮಿಯಾವಾಗ್ಲೂ ನಕ್ಕೋತ ಇರ್ತದ ಖರೇ ಅಂದ್ರ ಇದರ ಗುಟ್ಟು ಏನು ಅಂತಿದ್ರಲ್ಲ ? ನಮ್ಮ ನಶೀಬ ಅಂತ ಅದು ಇಂದು ಹೊರಬಿತ್ತು ನಾಳೆಬೇಕಾದ್ರ ನೀವೂ ನಮ್ಮನೀಗೆ ಬರ್ರಿ ತಿಳೀತದ ಸದಾನಂದರಾಯ್ರು, ನಾ ಬರೂ ಮುಂದ ಅದೇ ಕೆಲಸಕ್ಕೆ ಕೂತಿದ್ರು ಮುಗಿಸಿಕೊಳ್ಳಲಿ ಪಾಪ ! ಏಳ್ರಿನ್ನ

ಗೋವಿಂದ— ನಾಳೆ ನನಗೆ ನಿಮ್ಮ ಮನೀಗೆ ಬರೂದು ಆಗ್ತದೋ ಇಲ್ಲೊ? ಕೂಡ್ರಿ ಇನ್ನೊಂದು ತುಸಾ ವ್ಯರ್ಥ ಆದ್ಹಾಂಗ ಆತು ನಮ್ಮ ಈವತ್ತಿನ ಆದಿತ್ಯವಾರ ಸದಾನಂದರಾಯ್ರು ಹಿಂಗಡ ಪತ್ರದ ಮಜ ಕೂರಾದ್ರೂ ತಿಳಿವ್ರ ಅಷ್ಟೇ ಸಮಾಧಾನ ಆದ್ರೂ ಆದೀತು

ಚನ್ನಪ್ಪ— ಸದಾನಂದರಾಯ್ರೆ, ಆಗಲಿ ಇನ್ನೊಂದ್ಸಲಾ ನಿಮ್ಮ ಲಕ್ಚರು ಆದ್ರೆ, ಖರೇಅಂದ್ರ, ನೀವು ಎಲ್ಲಾರಿಗೂ ನಿಮ್ಮ ಹಿಕ್ಮತ್ ಹೀಂಗ ಪುಕಟೆ ಹೇಳಿಕೋತ ತಿರಗಬ್ಯಾಡ್ರವಾ ಈ ಕಾಲದಾಗ ಪುಕಟೆ ಕೊಟ್ಟವಿ ಅಂದ್ರ ಚಿನ್ನಕ್ಕೂ ತಾವ್ರು ಅಂತಾರ ಏನಿಲ್ಲಾ ಅಂದ್ರೂ ನಿಮ್ಮ ಹಿಂಗಡ ಪತ್ರದ ಲೆಕ್ಚರೀಗೆ ಒಂದ ಚಾವಾರ್ಟೆ ಫೀ ಅಂತ ಇಡಬೇಕರಪಾ

ಸದಾ— ಏನ ಹೇಳ್ತೇನಿ ಅದ ಹ್ಯಾಂಗ ಆದೀತ್ರಿ ಎಲ್ಲಾರೂ ನಿಮ್ಮ ಹಾಂಗೇ ಸ್ನೇಹಿತರು

ಚನ್ನಪ್ಪ— ಆದ್ರೆ ಏನಾತು ? ಯಾಕ ಆಗೂದಿಲ್ಲ? ಖರೇ ಅಂದ್ರ —

ಗೋವಿಂದ— ಖರೇಅಂದ್ರ, ಚನ್ನಪ್ಪ ಒಂದು ಯುಕ್ತಿ ಹೂಡ್ಯಾರ ತಿಳೀಲಿ ಲ್ಲೇನು ನಿಮಗ? ಮೊದಲು ನಿಮ್ಮ ಗುಟ್ಟು ಹೇಳಿಕೊಡ್ಲಿಕ್ಕೆ ಫೀ ಇಡು ಅಂತಾರ ನೀವು ಹೂಂ ಅಂದ್ರಿ ಅಂದ್ರ ಮುಂದಿನ ಮಾತು ಹೇಳ್ತಾರ

ಚನ್ನಪ್ಪ— ಮುಂದಿನ ಮಾತು! ಖರೇ ಅಂದ್ರ ಹಿಂಗಡ ಪತ್ರದ ವಿಚಾರ ಇನ್ನೂ ಸರಿಯಾಗಿ ನನಗೆ ತಿಳಿದಿಲ್ಲ ಮತ್ತೆ ಅದರೊಳಗ ನನ್ನ ಮುಂದಿನ ಮಾತು ಅಂದ್ರ- ನೀವೇ ಹೇಳ್ರಲಾ

ಸದಾ— ಹೌದು ಏನ ಹೇಳ್ತೇನಿ, ನನ್ನ ಹಿಂಗಡ ಪತ್ರದ ಲೆಕ್ಚರಿನಾಗ ಚನ್ನಪ್ಪನವರ ಮುಂದಿನ ಮಾತು ಏನಿರ್ತದ? ಅಥವಾ ಪುಸ್ತಕಕ್ಕೆ ಮುನ್ನುಡಿ ಇದ್ದಾಂಗ ನನ್ನ ಲೆಕ್ಚರಿಗೆ ಇವ್ರ

ಗೋವಿಂದ— ಶಾಣೇರು ಶಾಣೇರು ಅಂತೀರಿ ತೀರ್ರ್ತಿ ಆತು ನಾನೇ ಹೇಳ್ತೇನಿ ಆದ್ರೆ, ಚನ್ನಪ್ಪನವ್ರೆ, ಮಾತ್ರ ಅದು ಸುಳ್ಳು ಅಂತ ಆ

ಮ್ಯಾಲೆ ಸಾಧಿಸಬ್ಯಾಡ್ರಿ ಸದಾನಂದ ರಾಯ್ರು, ಮೊದಲು ನಿಮಗೆ ಫೀ ತಗೊ ಅಂತಾರ ನೀವು ಹುಂ ಅಂತ ಅಂದ್ರಿ ಅಂತ ಇಟಗೋರಿ ಆದ್ರೆ ಅಷ್ಟರಿಂದಲೇ ಕೆಲಸ ಆಗ್ತದೇನು ? ಚಾಪಾರ್ಟಿ ಕೊಟ್ರೆ ಒಂದು ಗುಟ್ಟು ಹೇಳ್ತೀನಿ ಅಂತ ನೀವು ಎಲ್ಲಾರ ಕೂಡ ಹೇಳಕೋತ ಅಡ್ಡಾಡಲಿಕ್ಕೆ ಬರ್ತದೇನು? ಇಲ್ಲ ಹೌದಲ್ಲೊ ? ಆಗ ಚನ್ನಪ್ಪನವರು ನಿಮ್ಮ ಸಹಾಯಕ್ಕೆ ಬರೂ ವಿಚಾರ ಮಾಡ್ಯಾರ, ತಿಳೀತೇನು ? ಈಗ ನನ್ಮುಂದೆ ಅಂದ ಹಾಂಗ ನಿಮ್ಮ ಹಿಂಗಡ ಪತ್ರದ ಸುದ್ದಿ ಮತ್ತೊಬ್ಬರ ಮುಂದೆ ಎತ್ತತಾರ ನಮಗೂ ಹೇಳ್ರಲಾ ಅಂತ ಅವರಂದ್ರು ಅಂದ್ರ "ಸದಾನಂದ ರಾಯ್ರು ಹೇಳಿದ್ರೇನ ಛಲೋ ನಡೀರಿ ಅವರ್ನ ಕರ್ಕೊಂಡು ಚಾ ಕುಡೀತಾ ಕುಡೀತಾ ಮೆಲ್ಲಗೆ ಅವರ ಬಾಯಿ ಬಿಡಿ ಸಿದ್ರೆ ತೀರ್ತು ಎಲ್ಲಾ ಹೊರಬೀಳ್ತದ "ಅಂತ ಅಂತಾರ ಗುಟ್ಟೊಂದ ಮಾತನ್ನ ತಿಳಕೊಳಲಿಕ್ಕೆ ಒದ್ದಾಡೂದು ಮನುಷ್ಯನ ಸ್ವಭಾವ ಅಂವ ಒಪ್ತಾನ ಅನಾಯಾಸವಾಗಿ ಚನ್ನಪ್ಪನವರ ಬಾಯನೂ ಸೀಂ ಆಗ್ತದ

ಚನ್ನಪ್ಪ— ಹೌದ್ರಪಾ, ಹೌದ್ರಪಾ ಖರೇ ಅಂದ್ರ, ಒಬ್ಬೊಬ್ಬರೀಗೆ ಒಂದೊಂದು ತರದ ಶಾಣೇತನ ದೇವ್ರು ಕೊಟ್ಟಿರ್ತಾನ ನೋಡ್ರಿ ನನ್ನ ಬುದ್ಧಿ ಇಷ್ಟು ದೂರ ಹ್ಯಾಂಗ ಮಾಡಿದ್ರೂ ಹೋಗ್ತಿದ್ದಿಲ್ಲ ಬಿಡ್ರಿ ಖರೇ ಅಂದ್ರ, ಖರೇ ಅದ ಅವ್ರ ಮಾತು ಅವ್ರು ಹೇಳದ್ಹಾಂಗ ಮಾಡಿದ್ರೂ ಮಾಡಬಹುದು ಊಟ ಹೋದ್ರೆ ಕೋಟಿ ಲಾಭ ಅಂತಾರ ಮಾತು ಯಾವ್ದೇ ಆಗಲಿ, ಅದರಾಗ ಇಷ್ಟು ಫಾಯದೆ ಮಾಡಿಕೊಂಡು ಬಿಡೂ ಶಾಣೇತನ ಅದ ಅಂತೇ ಗೋವಿಂದಪ್ಪನವ್ರು ಖಾಸಗಿ ಕೆಲಸ, ಆಫೀಸಿನ ಕೆಲಸ ಎರಡರಾಗೂ ರಾಯ್ರು ಬಲಗೈ ಆಗ್ಯಾರ

ಸದಾ— ಆದ್ರೆ ಏನ ಹೇಳ್ತೀನಿ ಚನ್ನಪ್ಪನವ್ರೆ, ಗೋವಿಂದರಾಯ್ರು ಚ್ಯಾಷ್ಟಿ ಮಾಡಿದ್ರು ಅಂತ ನೀವು ಅವರಂದ್ಹಾಂಗ ಮಾಡಬ್ಯಾಡ್ರಪಾ ಮತ್ತೆ ಮಾತು ರಾಯ್ರ ಕಿವೀವರಿಗೂ ಹೋತು ಅಂದ್ರ ಫಜೀತಿ ಯಾದೀತು

ಚನ್ನಪ್ಪ— ಬ್ಯಾಡಂದ್ರ ಬ್ಯಾಡ ಖರೇ ಅಂದ್ರ

ಗೋವಿಂದ— ಇರ್ಲಿ ಬಿಡ್ರಿ ಸದಾನಂದ ರಾಯ್ರ್, ಹೇಳಿ ಬಿಡ್ರಲಾ ಮತ್ತೆ ಅಷ್ಟಕ್ಕೆ ನಾಳೆ ಚನ್ನಪ್ಪನವ್ರ ಮನೀಗೆ ಹೋಗಿ ತ್ರಾಸಕೊಡೂದು ಯಾಕೆ ! ಚಾಕುಡ್ದೇ ಹೇಳ್ಬೇಕು ಅಂತ ನಿಮಗಿದ್ರ, ಚಾ ಕುಡನೇ ಕೇಳ್ಬೇಕು ಅಂತ ಚನ್ನಪ್ಪನವರಿಗಿದ್ರ ನಾಳೆ ಮೂರೂ ಮಂದಿ ಕೂಡಿ

ಚನ್ನಪ್ಪ— ಗೋವಿಂದಪ್ಪನವರೇ, ಈಗ ಸದಾನಂದ ರಾಯ್ರೀಗೆ ತ್ರಾಸ ಕೊಡೂದು ಬ್ಯಾಡ ಖರೇ ಅಂದ್ರ ಆದಿತ್ಯವಾರದ ಕೆಲಸ ಅವರಿಗೂ ಅದೆ ನಮಗೂ ಅದೆ ನಾಳೆ ನೀವಂದ್ಹಾಂಗ ಮಾಡೋಣ ಆಫೀಸ ಬಿಟ್ಟಕೂಡ್ಲೆ ಮೂರೂ ಮಂದಿ ವಾಕಿಂಗ ಹೋಗೋಣ ಆಗ ಕೇಳೋಣಂತೆ ಖರೇ ಅಂದ್ರ ತಲೀ ಶಾಂತ ಇದ್ದಾಗ ಹೇಳೂದು ಕೇಳೂದು ಛಲೋ ಹೇಳವ್ರು ಬೇಷಾಗಿ ಹೇಳ್ತಾರ ಕೇಳವ್ರು ಬೇಷಾಗಿ ತಿಳಕೋತಾರ ಇಂದ ಚಾ ಪಾರ್ಟಿ ತಪ್ಪಿದ್ರೂ ಇಷ್ಟಾದ್ರೂ ಲಾಭ ಆತಲ್ಲಾ ಸಾಕು

ಗೋವಿಂದ— ಆಗ್ಲಿ ಹಾಂಗೇ ಆಗ್ಲಿ ಗುಟ್ಟೂ ಹೇಳ್ರಿ, ಕೆಲಸಾನೂ ಹಾಳ ಮಾಡಿಕೊಳ್ರಿ ಅನ್ನೂದು ಯೋಗ್ಯ ಅಲ್ಲ ಬರ್ತೇವಿ, ಸದಾನಂದರಾಯ್ರಿ ಅಥವಾ ಮನೀಯೊಳಗ ಕುಂತಾದ್ರೂ ಏನ ಮಾಡ್ತೀರಿ ನಡೀರಲ್ಲ ನಮ್ಮ ಸಂಗಡ

ಸದಾ— ಬರ್ತಿದ್ದೆ ಆದ್ರೆ ಏನ ಹೇಳ್ತೀನಿ ಇನ್ನ ಮ್ಯಾಲೆ ಪ್ಯಾಟೀಗೆ ಹೋಗಿ ಒಂದಿಷ್ಟು ಸಾಮಾನು ತರೂದದ

ಚನ್ನಪ್ಪ— ಹಾಂಗಾದ್ರೆ ಬೇಷೇ ಆತಲಾ ನಡೀರಿ

ಗೋವಿಂದ— ನಿಮಗೆ ಏನೂ ತಿಳಿಯೂದಿಲ್ಲ ಬಿಡ್ರಿ ಚನ್ನಪ್ಪನವ್ರೆ ಸಾಮಾನ ತರೂದು ಅಂದ್ರೆ– ಲಿಷ್ಟ ಮಾಡಿಕೊಂಡು ಹೋಗಬೇಕಾಗ್ತದ ಇಲ್ಲಾಂದ್ರ ಮನಿಯಾಗ ಮೆಣಸು–ಜೀರಿಗೆ ತರ್ರಿ ಅಂದ್ರೆ ಮೇಣ, ಸೂಜಿ, ರಿಗ ಅಂತಾ ಆಗಿ ರಿಗೆ ಅಂದ್ರೇನು ಅಂತ ತಿಳಕೊಳ್ಳಲಿಕ್ಕೆ ಮತ್ತೆ ಮನೀಗೆ ಓಡಿ ಬರಬೇಕಾಗ್ತದ ನಾವು ಗಂಡಸ್ರ

ಎಷ್ಟೇ ಶಾಣೇರು ಅಂತ ಅಂದ್ಕೊಂಡ್ರೂ ಸಂಸಾರದ ಕೆಲಸ ಅಂದ್ರ ಹುಚ್ಚ ಮಂಗ್ಯಾ ಆಗವ್ರೆ ತಿಂಗಳದಾಗ ನಾಕದಿನಾ ಅಡಿಗೆ ಮಾಡೂ ವಾಳೀ ಬಂದಾಗ ಏನಹೇಳ್ಲಿ, ನಾವೇ ಮಾಡೇವಿ ಅಂತ ತಿಂತೇವಿ ಇಲ್ಲಾಂದ್ರ

ಚನ್ನಪ್ಪ— ಖರೇ ಅಂದ್ರ ಈ ಮಾತೂ ಖರೇನೆ ನಡೀರಿ ಹಾಂಗಾದ್ರ ಬರ್ತೇವಿ, ಸದಾನಂದ ರಾಯ್ರೆ ?

ಗೋವಿಂದ— ಬರ್ತೇವಿ ನಾಳಿನ ಪ್ರೋಗ್ರಾಂ ಮಾತ್ರ ಮರೀಬ್ಯಾಡ್ರಿ ಮನೀಗೆ ಬರೂದು ತುಸಾ ತಡಾ ಆದೀತು ಅಂತ ನಾ ಹೇಳೀ ಬಂದಿ ರ್‍ತೀನಿ ನೀವೂ ಪರವಾನಗಿ ಪಡಕೊಂಡು ಬಂದ ಬಿಡ್ರಿ, ಸದಾ ನಂದರಾಯ್ರೆ, ಇನ್ನೊಂದು ಲೋಟ | ನೀರುಕೊಟ್ಟ ಬಿಡ್ರಿ ಈವತ್ತ ಯಾಕೋ ನಿಮ್ಮನೀ ನೀರು ಬಲನವಿ ಅನಸಲಿಕ್ಕ ಹತ್ಯಾದ ಬರ್ತೇವಿ ಅಂ

ಕಾವೇರಿ— ಹೋದ್ರೇನು? ನಿಮ್ಮ ಗೋವಿಂದಪ್ಪ "ಸಾಕಾಗ್ಯದ, ಒಂದಿಷ್ಟು" ಅಂದ ಕೂಡ್ಲೆ, ಎಲ್ಲಿ ಚಾನೇ ಮಾಡಸಿಕೊಡ್ರಿ ಅಂತ ಅಂತಾರೇನೋ ಅಂತ ಮಾಡಿದ್ದೆ ಆಗ ನಿಮಗ–ನನಗ ಅಂತ ಎರಡೇ ಸಿಂಗಲ್ ಇಟ್ಟಿದ್ದೆ ಹೊತ್ತಿಗೆ ಸರಿಯಾಗಿ ಹೇಳಿ ಕಳಿಸಿದವರ್ಹಾಂಗೆ ಬಂದ ನಿಮ್ಮ ಚನ್ನಪ್ಪ ನನ್ನ ಪಾಲಿಂದು ಅವರೀಗೆ ಹೋತು ಮನಿಯಾಗ ಹಾಲೂ ತುಸಾ ಅವ ಮತ್ತೆ ಈಗ ಇವರಿಗೂ ಚಾ ಕೊಟ್ರೆ ನನಗೇನ ಗತಿ ಅಂತ ಗಾಬರಿ ಆಗಿದ್ದ

ಸದಾ— ಹೌದು ನನಗೂ ಅನಿಸಿತ್ತು ಹಾಂಗೇ ಪುಣ್ಯಕ್ಕೆ ಧಣ್ಣಿನ್ನ ನೀರು ಕೇಳ್ದ್ರಾ, ಏನ ಹೇಳ್ತೀನಿ, ಚಾ ಪಾರ್ಟಿ ತಪ್ಪು ರಾತ್ರಿ ಊಟ ಉಳಿ ತಾಯ ಆಗಲಿಲ್ಲ ಮತ್ತ ಮ್ಯಾಲೆ, ಏನ ಹೇಳ್ತೀನಿ, ಆಗ ಕುಡದ ಚಾನೂ ವ್ಯರ್ಥಾತು ಮತ್ತೆ ಈಗ ನಿನ್ನ ಹಾಲಿನ ಲೆಕ್ಕ ಮಾಡ್ಬೇಕು ಅಂದ್ರ, ನಮ್ಮ ಹಿಂಗಡ ಪತ್ರ ತಯಾರಿಸಬೇಕು ಅಂದ್ರ ಮತ್ತೊಮ್ಮೆ ಚಾ ಕುಡೀಬೇಕಾತು

ಕಾವೇರಿ — ಈಗ ಸಿಗೂ ಸಿಂಗಲ್ಲಿನ ಪುರುಷಿನಾಗೇ ನಿಮ್ಮ ಹಿಂಗಡ ಪತ್ರನೋ, ಕೈಗಡ ಪತ್ರಾನೋ ಪೂರಾ ತಯಾರ್ಮಾಡ್ರಿ, ಮತ್ತೆ ನಡವೆ ಬೇಕಂದ್ರ ಹಾಲೇ ಇಲ್ಲ

ಸದಾ— ಆದಿತ್ಯವಾರ ನಾ ಮನಿಯಾಗ ಇರ್ತೇನಿ, ಹೊತ್ತು ವ್ಯಾಳ್ಯಾ ಹೇಳಿಕೇಳಿ ಬರೂದಿಲ್ಲ ಅಂತ ಗೊತ್ತದಲ್ಲ ನಿನಗೆ, ಏನ ಹೇಳ್ತೇನಿ, ಒಂದಿಷ್ಟು ಹೆಚ್ಚು ತಗೋಬೇಕಿತ್ತು

ಕಾವೇರಿ— ಮತ್ತೆ ಆಗ ಅಂದ್ರಲ್ಲ, ಇಡೀ ತಿಂಗಳ ಒಂದೇ ಅಳತಿ ತಗೋಬೇಕು ಅಂತ ಹೀಂಗೇನಾದ್ರೂ ಪ್ರಸಂಗ ಬರ್ತದ ಹಬ್ಬ ಹುಣಮಿ ಅಂತ ಇರ್ತದ ಒಂದೊಂದಿನಾ ಭಕ್ರಿಗೂಡ ಚಟ್ನಿ-ಮೊಸರು ಇರ್ಲಿ ಲಂತ ಅನಸ್ತದ ಕೊಂಡ ಮುಸರಿನಾಗ ಚಟ್ನಿ ಹಾಕ್ಕೊಂಬೂದೂ ಒಂದೇ (ಸ್ಟೋವ್ ನಪ್ಪಳ) ಮಜ್ಜಿಗೆಯಾಗ ಹಾಕ್ಕೊಂಬೂದೂ ಒಂದೇ ಅದಕೇ ಒಂದೊಂದಿನಾ ತುಸಾ ಹೆಚ್ಚು ಹಾಲ ತಗೊಂಡಿರ್ತೇನಿ ಒಂದೊಂದಿನಾ ಮಜ್ಜಗಿ ಹಾಳ್ಮಾಡಬಾರ್ದು ಅಂತ ಕಡಮಿ ಹಾಲು ಹಾಕಿಸಿಕೊಂಡಿರ್ತೇನಿ

ಸದಾ— ಭೇಷ್ ಏನ ಹೇಳ್ತೇನಿ, ಸಂಸಾರ ಅಂದ್ರ ಹೀಂಗ ನಡಸಬೇಕು ಆದ್ರೂ ಪಾವು ಹಚ್ಚು, ನವಟಾಕ ಕಡಿಮೆ, ನವಟಾಕ ಹೆಚ್ಚು-ಪಾವು ಕಮ್ಮಿ ಅಂತ ಲೆಕ್ಕ ಮಾಡೂದರೊಳಗೆ ತಲಿ ಖರಾಬಾಗಿ ಹೋಗ್ತದ ಏನ ಹೇಳ್ತೇನಿ, ನಮ್ಮ ಹಿಂಗಡ ಪತ್ರ ಹಿಂದೆ ಬಿದ್ದು ಹೋಗ್ತದ.

ಕಾವೇರಿ— ನೀವು ನಿಮ್ಮ ಬಾಕಿ ಲೆಕ್ಕ ಮುಗಸ್ರಿ ಆಗ್ಲೆ ಹೇಳಿದೆನಲ್ಲ, ಶಾಮು ಹಾಲಿನ ಲೆಕ್ಕಾ ಮಾಡಿ ಕೊಡ್ತಾನಂತ ಬ್ಯಾಡಾ, ಹಾಲಿನವ್ನ ಕೇಳಿದ್ರೆ ಅಂವ ಹೇಳೇ ಹೇಳ್ತಾನ

ಸದಾ— ಅಂವ ಏನ ಹೇಳ್ತಾನ ಅವನ ತಲಿ ? ಏನ ಹೇಳ್ತೇನಿ, ೬೦ ರೂಪಾಯಿ ಅನ್ನಬೇಕಾದ್ರೆ ಮೂರಿಪ್ಪತ್ತು ರೂಪಾಯಿ ಅನ್ನೂ

ಮನಶಾ ಅಂವ  ಮ್ಯಾಥಮ್ಯಾಟಿಕ್ಸ್ ಗ್ರ್ಯಾಜ್ಯುಯೇಟಗ ಬರದಿದ್ದ ನವಟಾಕ ಕಮ್ಮಿ ಪಾಪ ಹೆಚ್ಚಿನ ಲೆಕ್ಕ ಅಂವೇನ ಮಾಡ್ತಾನ ? ಏನ ಹೇಳ್ತೇನಿ

ಕಾವೇರಿ— ಎಲ್ಲಾ ಹೇಳ್ತಾನ ಇಲ್ಲಾಂದ್ರ ಹತ್ತ ಎಮ್ಮಿ ಕಟ್ಟಿತಿದ್ದನೇನು? ಅವನ ಕೊಳ್ಳಾಗ ನೋಡಿರೋ ಇಲ್ಲೊ ? ಏನಿಲ್ಲೆಂದ್ರೂ ೫ ತೊಲಿ ಬಂಗಾರದ ಚೇನ ಅದ

ಸದಾ— ಅದsನೇ ಅದೆ ಆದ್ರೆ ಏನ ಹೇಳ್ತೇನಿ ಅದರ ಗುಟ್ಟ್ಟ ಬ್ಯಾರೇ ಅದ ಸೇರು ಹಾಲನ್ನ ಎರಡು ಸೇರು ಮಾಡಿ ತಾಜಾ ಹಾಲು ಅಂತ ಮಾರೂ ಗುಟ್ಟ್ಟ ಅಂವಗ ಗೊತ್ತದ ಅಂವನ ಗಿರಾಕಿಗಳೆಲ್ಲ ನಮ್ಮಂಥ ಹಿಂಗಡ ಪತ್ರದ ಬಹಾದ್ದೂರರೇ ಹಾಲಿನೊಳಗೆ ನೀರೊ, ನೀರೊಳಗೆ ಹಾಲೊ ಅಂತ ಅಂದ್ಬಿ ಅಂದ್ರ ಮಾರನೇ ದಿನ ಹಾಲು ಅನ್ನೊ ನೀರೂ ನಮಗೆ ಸಿಗೂದಿಲ್ಲ ಏನ ಹೇಳ್ತೇನಿ, ಎರಡು ಸೇರಿನಾಗ ಮೂರು ಪಾವಸೇರಿನ ರೊಕ್ಕ ಮುಳಗಿದ್ರೂ ಪಾವಸೇರಿನ ಹಣ ಅಂವಗೆ ಲಾಭಾನೇ ಏನ ಹೇಳ್ತೇನಿ

ಕಾವೇರಿ— ಈಗ ನೀವು ಎಲ್ಯಾರೂ ಹೊರಗೆ ಹೋಗ್ತೀರೇನು ?

ಸದಾ— ಇಲ್ಲ ಯಾಕೆ? ಏನ ಹೇಳ್ತೇನಿ, ಬ್ಯಾಸರ ಬಂತೇನು ನನ್ನ ಮಾತು ?

ಕಾವೇರಿ— ಹಾಂಗಾದ್ರ ನಾ ಇಷ್ಟು ಇಲ್ಲೆ ತುಂಗಕ್ಕನ ಮನೀಗೆ ಹೋಗಿ ಬರ್ತೇನೆ

ಸದಾ— ಲಗೂ ಬಾ ಮತ್ತೆ ೫॥ ತಗೂದರೊಳಗಾಗಿ ಬಂದ್ಬಿಡು ಆಮ್ಯಾಲೆ ನಾನೂ ಒಂದಿಷ್ಟು ಅಡ್ಡಾಡಿಕೊಂಡು ಬರ್ತೇನಿ

ಕಾವೇರಿ— ಹುಂ ಬಾಗಿಲಕಡೆ ಲಕ್ಷ್ಯ ಇರಲಿ ನಾಯಿ–ಗೀಯಿ ಒಳಗೆ ಹೋದೀತು

ಸದಾ— ಒಂದನೇ ತಾರೀಖಿನಿಂದ ಎಂಟನೇ ತಾರೀಖಿನ ವರೆಗೆ ದಿನಾ ೧॥ ಸೇರು ಅಂದ್ರೆ ? ಇರ್ಲಿ ಇದನ್ನ ಶಾಮು ಮಾಡಿಕೊಡ್ತಾನ ಉಳಿದದ್ದು ಆಫೀಸ ಕ್ಯಾಂಟೀನದ್ದು ಆರು ರೂಪಾಯಿ ಎಂಟಾಣೆ ಮನಿಭಾಡಿಗೆ ೧೬ ರೂಪಾಯಿ ಕಟ್ಟಿಗೆ ಆರು ರೂಪಾಯಿ, ಕಿರಾಣಿ ಅಂಗಡೀದು ೫೨ ರೂಪಾಯಿ ಎಲಾ, ಏನ ಹೇಳ್ತೇನಿ, ಇಷ್ಟ ಹ್ಯಾಂಗಾತು ಇದು ? ಬೆಲ್ಲ ಸೇರಿಗೆ ಮೂರಾಣೆ ಹುಣಸೀ ಹಣ್ಣು ಸೇರಿಗೆ ಆರಾಣೆ ಅಂದಮ್ಯಾಲೆ ಹುಣಸೇ ಹಣ್ಣು ಬಿಟ್ಟು ಇನ್ನ ಮ್ಯಾಲೆ ಬೆಲ್ಲಾ ತಿನ್ನೂದೇ ಛಲೋ ಅಂತ ಕಾಣಸ್ತದ ಹೌದು. ಮುಂದಿನ ತಿಂಗಳಿಂದ ಹಿಂಗಡ ಪತ್ರದಾಗಿಂದ ಹುಣಸೇ ಹಣ್ಣು ವಜಾ ಯಾಕೆ, ಬಂದ್ಬಿಟ್ಟೆ

ಕಾವೇರಿ— (ಪ್ರವೇಶಿಸಿ) ತುಂಗಕ್ಕ ಇದ್ದಿಲ್ಲ ಮನಿಯಾಗ

ಸದಾ— ಛೇಷಾತು ಅಲ್ಲಾ, ಏನ ಹೇಳ್ತೇನಿ ಕಿರಾಣಿ ಅಂಗಡಿ ಲೆಕ್ಕ ಈ ತಿಂಗಳದಾಗ ೫೨ ರೂಪಾಯಿ ಆಗ್ಯದ ಹುಣಸೇ ಹಣ್ಣು ಆರಾಣೆಗೆ ಸೇರು ಮೆಣಸಿನಕಾಯಿ ರೂಪಾಯಿಗೆ ಸೇರು ಹೀಂಗ ಧಾರಣಿ ಏರಿದಮ್ಯಾಲೆ ನಾವು ಹ್ಯಾಂಗ ಬದಕಬೇಕು? ಬೇಕಾದಂಥ ಹಿಂಗಡ ಪತ್ರ ಇರ್ಲಿ ಮುಗ್ಗರಿಸಿ ಹೋದೀತು ಏನ ಹೇಳ್ತೇನಿ, ಒಂದು ಕೆಲಸ ಮಾಡೋಣೇನು ?

ಕಾವೇರಿ— ಹೇಳ್ರಿ ಅದಕೇನು ? ಆದರೆ ನಾವು ಒಂದ್ಬಿಟ್ಟು ಹತ್ತ ಕೆಲಸ ಮಾಡಿದ್ರೂ ಧಾರಣಿ ಏನು ಇಳಿಲಿಕ್ಕಿಲ್ಲ

ಸದಾ— ಅದು ಖರೇ ಧಾರಣಿ ಇಳೀಲಿಕ್ಕಿಲ್ಲ ಅಂತೇ ನಾವು ಕೆಲಸ ಮಾಡ ಬೇಕಾಗ್ಯದ

ಕಾವೇರಿ— ಅಂದ್ರೆ ನನಗೂ ನೋಕರಿ ಮಾಡಂತೀರೇನು ?

ಸದಾ— ಅಲ್ಲೆ, ಲೆಕ್ಕ ಹಾಂಗ ಬಾಯಿಗೂಡಿಸಬೇಕು ಅಂತ ನಾ ಇಲ್ಲಿ ಒದ್ಯಾಡಲಿಕ್ಕ ಹತ್ತೇನಿ ನೀ ನಗಚಾಟಗಿ ಮಾಡ್ತಿಯಲ್ಲ ! ಏನ ಹೇಳ್ತೇನಿ ಪರೀಕ್ಷೆ ಪಾಸಮಾಡಿದ್ರೆ ನೀನೂ ನೋಕರಿ ಮಾಡ್ಬಹುದಿತ್ತು ಅದಂತೂ ಈಗ ಆಗೂ ಮಾತಲ್ಲ ಅದಕೆ ಏನ ಹೇಳ್ತೇನಿ ,

ಕಾವೇರಿ— ಹೇಳ್ರಿ ಅಂದೆನಲ್ಲ ಆಗಲೇ

ಸದಾ— ನೋಡು ಹುಣಸಿಹಣ್ಣು ಪಿತ್ಥ ಪದಾರ್ಥ ನೀ ಯಾವಾಗಾರ ತಲೀತಿರಗತದ ಅಂತಿರ್ತಿ ಖಾರಾನೂ ದೇಹಕ್ಕ ಛಲೋದಲ್ಲ. ಒಮ್ಮೊಮ್ಮೆ ನನಗೂ ಹೊಟ್ಟ್ಯೊಳಗೆ ಉರಿಉರಿ ಅನಸ್ತದ ಮುಂದಿನ-ಅಂದರೆ ಈ ತಿಂಗಳಿಂದ ಹುಣಸೀಹಣ್ಣು ಖಾರಾ ಎರಡೂ

ಕಾವೇರಿ— ಅಯ್ಯೋ! ಆಗಿಹೋತು ಹುಣಸೀಹಣ್ಣು ಏನು ಬೆಲ್ಲಾ ತಿಂದ ಹಾಂಗ ತಿಂತಾರೇನು? ಖಾರಾ ಅಂದ್ರೆ ಕೊಬ್ರಿ ತಿಂದ ಹಾಂಗ ತಿಂತಾರೇನು? ಏನೋ ಒಂದಿಷ್ಟು ರುಚೀಗೆ ಅಂತ ಅಡಗಿ ಯಾಗ ಹಾಕ್ತಾರ ಹುಳಿ-ಖಾರ ಇಲ್ಲದಿದ್ರೆ ನಾಲಗಿಯಾದ್ರೂ ಯಾಕ ಬಂದೀತು? ಶಾಮೂ ಜಡ್ಡಿಂದ ಎದ್ದಮ್ಯಾಲೆ ಪಥ್ಯಾದ ಕೂಳು ಹಾಕಿದೆವಲ್ಲ! ಹದಿನೈದು ದಿನದಾಗ ಹ್ಯಾಂಗ ಎಲವು ಚರ್ಮ ಆದ ಗೊತ್ತದನೋ ಇಲ್ಲೋ? ಧಾರಣಿ ಏರ್ಯದ ಅಂತ ಉಪ್ಪು-ಖಾರ ಹುಳಿ ಬಿಟ್ಟು ಪಥ್ಯದ ಕೂಳು ತಿಂದವಿ ಅಂದ್ರೆ ಅಡಗಿ ಮಾಡ್ಲಿಕ್ಕೆ ಇನ್ನೊಬ್ರನ್ನ ತರಬೇಕಾದೀತು ನಿಮ್ಮ ಕೆಲಸ ಮಾಡ್ಲಿಕ್ಕೆ ಆಫೀಸಿನವ್ರು ಇನ್ನೊಬ್ರನ್ನ ನೇಮಿಸಿಕೊಳ್ಳಬೇಕಾದೀತು

ಸದಾ—ಹೀಂಗತೀಯಾ? ಆದ್ರೆ, ಏನ ಹೇಳ್ತಿನಿ ಆರೋಗ್ಯ ಶಾಸ್ತ್ರದಾಗ

ಕಾವೇರಿ— ಆರೋಗ್ಯ ಶಾಸ್ತ್ರದಾಗ ಹೇಳಿದ್ದನ್ನ ಹೇಳಬ್ಯಾಡ್ರಿ ಶಾಸ್ತ್ರದಾಗ ಹೇಳಿದ್ದನ್ನೆಲ್ಲ ಮಾಡ್ಲಿಕ್ಕೆ ಬರ್ತದೇನು? ಮಾಡಿಯಾರ ಮಾಡ್ತೀವೇನು? ಶಾಸ್ತ್ರದಾಗ ಹೇಳಿದಷ್ಟು ವ್ರತಾ-ಉಪವಾಸ ಮಾಡಿದ್ರೆ ತಿಂಗಳದಾಗ ಎಂಟ ದಿನದ ಖರ್ಚು ಸಹಜ ಉಳೀಬಹುದು ಯಾರು ಮಾಡ್ತಾರ ಹಾಂಗ? ಸುಳ್ಳೇ ಮಂದೀಗೆ ಯಾಕೆ ಅನ್ನೋಣ? ನಾವಾರ ಮಾಡ್ತೇವೇನು? ಹುಟ್ಟಿದ ಮ್ಯಾಲೆ ನೀವು ಒಂದು ಏಕಾದಶೀನೂ ಮಾಡ್ಲಿಲ್ಲ-ನಾ ಒಂದು ಶುಕ್ರವಾರಾನೂ ಮಾಡ್ಲಿಲ್ಲ ಇನ್ನ ನೀವಂತೀರಿ ಅಂದಮ್ಯಾಲೆ ಇನ್ನಮುಂದೆ ಹುಣಸಿಹಣ್ಣು ಮೆಣಸಿನಕಾಯಿ ತುಸಾ ಕಮ್ಮಿ ತರ್ರಿ, ಬೇಕಾದರೆ. ಆದರೆ ಅಪೂಟ ಬ್ಯಾಡ ಅಂದ್ರೆ ಮಾತ್ರ ನಡೀವ್ಹಾಂಗಿಲ್ಲ

ಸದಾ— ಆತು ಏನ ಹೇಳ್ತೇನಿ, ಮತ್ತೆ ಹೀಂಗೇ ಇನ್ಯಾತರಾಗಾದ್ರೂ

ಖರ್ಚು ಕಡಿಮಿ ಮಾಡ್ಬೇಕು ಮತ್ತೆ ಯಾವ 'ಆಯುಟೆಮ್'ರವಾ ರೊಕ್ಕತಿಂಬೂ 'ಆಯಿಟೆಮ್ಮು' ?

ಕಾವೇರಿ— ಈಗ ವ್ಯಾಟಿಕಡಿ ಹೋಗ್ತೀರಿ, ಹೌದಲ್ಲೊ ? ಛಲೋ ಕ್ಯಾಬೀಜ ಬಂದಾವಂತ ಒಂದ ತಗೊಂಬರ್ರಿ

ಸದಾ— ಖರೇಅಂದ್ರ, ಏನ ಹೇಳ್ತೇನಿ

ಕಾವೇರಿ— ರೊಕ್ಕ ಇಲ್ಲ ಅಂತೀರಿ ಹೌದಲ್ಲೊ? ಅದು ಗೊತ್ತದ ನನಗ ಕ್ಯಾಬೀಜಕ್ಕೇನು ಆರೆಂಟಾಣೆ ಇರಬಹುದು ಇಷ್ಟುಮಂದಿ ಗುರತ ನವ್ರು ಇದ್ದಾರಲ್ಲ ಇಸಕೊಳ್ರಿ ಒಂದೆರಡು ರೂಪಾಯಿ ಕಡಾ. ಯಾರೇನು ಸದಾಕಾಲದಾಗ ಕೈಯಾಗ ರೋಖ ರೊಕ್ಕಾ ಇಟ್ಕೊಂಡು ಸಂಸಾರ ಮಾಡೂದು ಅಷ್ಟುರಾಗೇ ಅದ ಕೊಡಕೊಂಬೂದು ನಡದೇ ನಡೀತದ

ಸದಾ— ಹೌದನ್ನು ಆದರೆ ನನ್ನ ಹಿಂಗಡ ಪತ್ರದಾಗ ಒಂದ 'ಆಯಿಟೆಮ್' ಹೆಚ್ಚಾಗ್ತದ

ಕಾವೇರಿ— ಅಂದ್ರೆ ?

ಸದಾ— ಖರ್ಚಿನ ಬಾಬ್ತು ಒಂದು ಹೆಚ್ಚಾಗ್ತದ

ಕಾವೇರಿ— ಆಗಲಿ ಹ್ಯಾಂಗೂ ನೀವು ಹಿಂಗ-ಏನದು ? (ಸದಾನಂದ ಹಿಂಗಡ ಪತ್ರ ಎನ್ನುವನು) ಹಿಂಗಡ ಪತ್ರದವರು ಹತ್ತರ ಸಂಗಡ ಹನ್ನೊಂದು ಚನ್ನಪ್ಪನ ಹತ್ರ ಹೇಳಿದ್ರಲ್ಲ ಆಗಲೇ, ಹಿಂಗಡ ಪತ್ರ ಬರದರೆ ಖರ್ಚುಬಾಯಿಗೂಡಿಸಲಿಕ್ಕೆ ಬರ್ತದ ಅಂತ

ಸದಾ— ಆಗ್ಹೋಯ್ತು ಇನ್ನು ನಿನ್ನಹತ್ತರ ಮಾತಾಡವ್ಹಾಂಗೇ ಇಲ್ಲ. ರೊಕ್ಕ ಇಲ್ಲ ಅನ್ನೊ ಮಾತು, ಏನ ಹೇಳ್ತೇನಿ, ಇನ್ನು ನಡೀಧ್ಹಾಂಗ ಆತಲ್ಲ ? ರೊಕ್ಕ ಇಲ್ಲಾ ಅಂತ ನಾ ಅಂದಾಗೆಲ್ಲ 'ಹಿಂಗಡ ಪತ್ರ' ಅಂತ ನೀ ಅನ್ನವಾಕಿಯೇನು ? ಆತು ನಿನ್ನ ಬತ್ತಳಿಕೆಯಾಗ ಒಂದು ಬಾಣ ಹೆಚ್ಚು ಬಂದ್ಹಾಂಗ ಆತು ನನ್ನ ಬತ್ತಳಿಕೆಯಾಗಿಂದು ಒಂದು ಕಮ್ಮಿಯಾದ್ಹಾಂಗ ಆತು ಆಗ್ಲಿ, ಏನ ಹೇಳ್ತೇನಿ, ಗಂಡ ಹೆಂಡತಿ ಅಂದರೆ ಒಂದೇ ನಿಂದು ಹೆಚ್ಚಾದ್ರೇನು, ನಂದ ಹೆಚ್ಚಾದ್ರೇನು ? ಮತ್ತೆ, ಅಂದ್ಹಾಂಗ ನಾ ಈಗ ಇಷ್ಟು ವ್ಯಾಟಿ ಕಡೆ

ಹೋಗಿ ಬರ್ತೇನೆ ಶ್ಯಾಮೂನ ಹತ್ರ ಅದಿಷ್ಟು ಹಾಲಿನ ಲೆಕ್ಕ ಮಾಡಿಸಿಡು ಏನ ಹೇಳ್ತೇನಿ, ಆವನ ಮುಂದೆ ಮಾತ್ರ ಹಿಂಗಡ ಪತ್ರದ ಸುದ್ದಿ ಹೇಳಬ್ಯಾಡ ನೀವಿಬ್ರೂ ಕೂಡಿ ಹಿಂಗಡ ಪತ್ರದ ಬಾಣಬಿಟ್ರೆ ಅಂದ್ರೆ ನಾ ಉಳೀಲಿಕ್ಕಿಲ್ಲ ಏನ ಹೇಳ್ತೇನಿ

ಕಾವೇರಿ— ಏನೂ ಹೇಳಬ್ಯಾಡ್ರಿ ತಿಳೀತು ನಾ ಏನ ಮಳ್ಳಿ ಅಂತ ತಿಳದ್ರೇನು ? ಪಾಪ ! ನಿಮ್ಮ ತ್ರಾಸು ನನಗೆ ಗೊತ್ತಿಲ್ಲೇನು ? ಹೀಂಗಂದೆ ಅಂತ ಕ್ಯಾಬೀಜ ಮರೀಬ್ಯಾಡ್ರಿ ಮತ್ತೆ.

ಸದಾ— ಹೇಳು ನಿನ್ನ ಕೈ ಮೇಲಾಗ್ಯದ ಈಗ ಈಗಲ್ಲದಿದ್ದರೆ–ಏನ ಹೇಳ್ತೇನಿ, ಗಾಳಿ ಬಂದಾಗ ತೂರಿಕೊಂಡು ಬಿಡು ಏನ ಹೇಳ್ತೇನಿ

ಕಾವೇರಿ— ತೂರಿಕೊಳ್ಳಬೇಕಾದ್ರ ಗಾಳಿ ಬಂದ್ರ ತೂರಿಕೊಳ್ಳಬೇಕು ಅಂತ ನನಗೇನಿಲ್ಲ ಬಿಡ್ರಿ ನಾ ಹೇಳೂದು ನನ್ನ ಮಾತಲ್ಲ, ನಿಮ್ದು ನಿಮ್ಮ ಶಾಣೇತನ ಮಂದೀ ಮುಂದ ತೋರಿಸೂ ಹುಚ್ಚು ನಿಮಗೆ ಭಾಳ ಅದ ಶಾಣೇತನ ತೋರಿಸಲಿಕ್ಕೆ ಹೋಗಿ ಇಂದಾದ ಹಾಂಗ ಪೆಚ್ಚಾಗ್ತೀರಿ ಅದಕ್ಕೇ

ಸದಾ— ತಿಳೀತು ತಿಳೀತು ಬಿಡು ಕಾರ್ಯೇಷು ಮಂತ್ರಿ–ಅಂದ್ರೆ ಹೆಂಡ್ತಿ ಗಂಡನ ಮಂತ್ರಿ ಅಂತ ಏನ ಹೇಳ್ತೇನಿ ನಿನ್ನ ಸಲಹೆ ನಮಗೆ ಸಂಪೂರ್ಣ ಮಾನ್ಯ ಅದ ಇನ್ನೊಮ್ಮೆ ಕನಸನಾಗ ಆರ ಆಗ್ಲಿ, ನಾ ಹಿಂಗಡ ಪತ್ರದ ಸುದ್ದಿ ಎತ್ತೂದಿಲ್ಲ, ಆತಿಲ್ಲೊ ಅಲ್ಲೆ ಕ್ಯಾಬೀಜಕ್ಕಾಗಿ ಮಂದಿ ಹತ್ರ ಎಲ್ಲಿ ನಾಲಾ ಕೇಳ್ಲಿ ನಿನ್ನ ಹತ್ರ ಇದ್ರೆ–

ಕಾವೇರಿ— ಆತು ಕೊಡ್ತೇನಿ ಬರೇ ಎಂಟಾಣೆ ಅದ ಆದ್ರೆ ನಾಳೆ ಪಗಾರ ಬಂದ ಕೂಡ್ಲೆ ಬಡ್ಡಿಸಹಿತ ಅಂದ್ರೆ ೧ ರೂಪಾಯಿ ನನಗೆ ಕೊಟ್ಟು ಆ ಮ್ಯಾಲೆ ನಿಮ್ಮ ಹಿಂಗಡ ಪತ್ರ ಮಾಡಿಕೊಳ್ರಿ ಅಂದ್ರೆ ಮಾತ್ರ

ಸದಾ— ಆಗ್ಲಿ, ಆಗ್ಲಿ ಏನ ಹೇಳ್ತೇನಿ ಪಗಾರೆಲ್ಲ ನಿನ್ನ ಕೈಗೇ ಕೊಟ್ಟು ಬಿಡ್ತೇನಿ ಹಿಂಗಡ ಪತ್ರನೂ ಬ್ಯಾಡ–ಏನೂ ಬ್ಯಾಡ ರೊಕ್ಕಾ ಮತ್ತು ಕೈಚೀಲಾ ಕೊಡು

---

# ನಮ್ಮ ಪುಸ್ತಕಗಳು



### ಏಕಾಂಕ ನಾಟಕಗಳು

| | | | |
|---|---|---|---|
| ಜಯ ಕರ್ನಾಟಕ | ೦ | ೬ | ೦ |
| ಯಮನ ನ್ಯಾಯಮಂದಿರ | ೦ | ೮ | ೦ |
| ನಡುಗಾಲ ಸರಕಾರ | ೦ | ೮ | ೦ |
| ಹುತಾತ್ಮರು | ೦ | ೮ | ೦ |
| ಅಡಕತ್ರಿ | ೦ | ೬ | ೦ |
| ಊಟದ ರುಚಿ | ೦ | ೬ | ೦ |
| ಶಸ್ತ್ರಸನ್ಯಾಸ | ೦ | ೮ | ೦ |
| ಹಿಂಗಡ ಪತ್ರ | ೦ | ೬ | ೦ |
| ಕೂಡಿ ಇರವ್ರು | ೦ | ೬ | ೦ |
| ಝುಂಗೀ ಕುಸ್ತಿ | ೦ | ೬ | ೦ |

### ಕಥಾ ಸಂಗ್ರಹಗಳು

| | | | |
|---|---|---|---|
| ಗೇಣು ಹೊಟ್ಟೆಗಾಗಿ | ೦ | ೩ | ೦ |
| ಸಂಧಿಕಾಲ | ೦ | ೭ | ೦ |
| ಹಾಡುವ ಹುಡಿಗೆ | ೦ | ೮ | ೦ |
| ಹಾತಿಮತಾಯಿ ಕಥೆಗಳು | ೦ | ೯ | ೦ |
| ಭಕ್ತಿ-ವಿಜಯ | ೧ | ೭ | ೦ |
| ಅರೇಬಿಯನ್ ನೈಟ್ಸ್ | ೧ | ೮ | ೦ |
| ಬೀರಬಲ್ಲನ ಕಥೆಗಳು | ೧ | ೮ | ೦ |
| ಸ್ತ್ರೀನೀತಿ ಕಥೆಗಳು | ೧ | ೮ | ೦ |
| ಭಟ್ಟಿ ವಿಕ್ರಮಾದಿತ್ಯನ ಕಥೆಗಳು | ೧ | ೮ | ೦ |
| ಭಾರತ ಕಥಾಸಂಗ್ರಹ | ೧ | ೦ | ೦ |

### ಕಾಮಶಾಸ್ತ್ರಗಳು

| | | | |
|---|---|---|---|
| ಕಾಮುಕಲಾನಿಧಿ | ೦ | ೮ | ೦ |
| ರತಿ ವಿಲಾಸ | ೦ | ೮ | ೦ |
| ಕಾಮೋನ್ಮಾದ | ೦ | ೭ | ೦ |
| ಕಾಮಸಂಜೀವಿನಿ | ೦ | ೮ | ೦ |

### ಪತ್ತೇದಾರಿ ಕಾದಂಬರಿಗಳು

| | | | |
|---|---|---|---|
| ಫರಾರಿ | ೦ | ೮ | ೦ |
| ಕರ್ಮಪತ್ನಿ | ೦ | ೮ | ೦ |
| ಕುಲಕರ್ಣಿಯ ಕೊಲೆ | ೦ | ೮ | ೦ |
| ಅವಸಾನಕಾಲ | ೦ | ೮ | ೦ |
| ಭೀಷ್ಮ ಪ್ರತಿಜ್ಞೆ | ೦ | ೮ | ೦ |
| ಸಿ ಆಯ್ ಡಿ | ೦ | ೯ | ೦ |

### ಇತರ

| | | | |
|---|---|---|---|
| ಕಲ್ಪವೃಕ್ಷ | ೪ | ೮ | ೦ |
| ಕನ್ನಡ-ಹಿಂದೀ ಸ್ವಯಂಬೋಧೆ | ೦ | ೮ | ೦ |
| ಶ್ರೀ ದೇವೀ ಮಹಾತ್ಮ | ೦ | ೧೨ | ೦ |
| ಶ್ರೀ ಬಸವಣ್ಣನವರ ವಚನಗಳು (ಬಾವಾರ್ಥ ಸಹಿತ) | ೦ | ೮ | ೦ |
| ಅಕ್ಕಮಹಾದೇವಿಯವರ ವಚನಗಳು (ಬಾವಾರ್ಥ ಸಹಿತ) | ೦ | ೮ | ೦ |
| ಕೊರವ ಕಟ್ಟಿಗೆಯ ಪಂತ್ರಿ | ೫ | ೮ | ೦ |

ಸಿಗುವ ಸ್ಥಳ **ಸಿಟಿ ಬುಕ್ ಸ್ಟಾಲ, ಹುಬ್ಬಳ್ಳಿ**

**Printed & Published by S V Shreshti at the Royal P P Hubli**